CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೩೯ | ಬೆಂಗಳೂರು, ಗುರುವಾರ, ಡಿಸೆಂಬರ್ ೧೬, ೨೦೦೪ (ಮಾರ್ಗಶಿರ ೨೫, ಶಕ ವರ್ಷ ೧೯೨೬) | ಸಂಚಿಕೆ ೫೦

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ದೊರೆಸಾನಿಪಾಳ್ಯ, ಬೆಂಗಳೂರು-560 076**

**ಮರು ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ2:ರೂಟ್ ಟ್ರೈನರ್‌ಸ್ಟ್ಯಾಂಡ್ಸ್:ಸಿಆರ್-5 :04-05, ದಿನಾಂಕ: 3ನೇ ಡಿಸೆಂಬರ್ 2004**

ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರು ಈ ವಿಭಾಗದಲ್ಲಿ 2004-05ನೇ ಸಾಲಿಗೆ ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಶೆಡ್ಯೂಲ್‌ನಲ್ಲಿ ನಮೂದಿಸಿದಂತೆ ರೂಟ್‌ಟ್ರೈನರ್ಸ್ ಮತ್ತು ಸ್ಟಾಂಡ್‌ಗಳನ್ನು ಸರಬರಾಜು ಮಾಡಲು ಮೊಹರು ಮಾಡಿದ ಟೆಂಡರ್‌ನ್ನು ದಿನಾಂಕ: 4.1.2005 ರ ಸಂಜೆ 4.00 ಗಂಟೆಯವರೆಗೆ ಸಲ್ಲಿಸಬಹುದಾಗಿದೆ. ಒಂದೊಮ್ಮೆ ಆ ದಿನದಂದು ಟೆಂಡರ್‌ನ್ನು ಯಾರೂ ಸಲ್ಲಿಸದಿದ್ದಲ್ಲಿ ದಿನಾಂಕ: 12.1.2005 ರಂದು 4.00 ಗಂಟೆಗೆ ಮರು ಟೆಂಡರ್ ಸಲ್ಲಿಸಬಹುದಾಗಿದೆ. ಈ ಕುರಿತು ಮತ್ತೆ ಪ್ರತ್ಯೇಕ ಟೆಂಡರ್ ಪ್ರಕಟಣೆ ಹೊರಡಿಸುವುದಿಲ್ಲ. ಟೆಂಡರ್‌ನ ಕೆಲಸಗಳನ್ನು ಒಪ್ಪಂದದ ದಿನಾಂಕದಿಂದ 31.3.2005 ರೊಳಗೆ ಮುಗಿಸಬೇಕು. ಒಂದು ಮಾದರಿ ರೂಟ್‌ಟ್ರೈನರ್ ಬ್ಲಾಕ್ ಮತ್ತು ರೂಟ್‌ಟ್ರೈನರ್ ಸ್ಟಾಂಡ್‌ನಲ್ಲಿ ಐದು ಸಂಖ್ಯೆಯಷ್ಟು ಅಳವಡಿಸುವಂತಿರಬೇಕು. ಒಂದೊಮ್ಮೆ ಟೆಂಡರ್‌ದಾರರು ಸರಬರಾಜು ಮಾಡಿದ ರೂಟ್‌ಟ್ರೈನರ್ ಸ್ಟಾಂಡ್‌ಗಳು ತೃಪ್ತಿಕರವಿಲ್ಲದಿದ್ದಲ್ಲಿ ಎಲ್ಲವನ್ನೂ ತಿರಸ್ಕರಿಸುವ ಪೂರ್ಣ ಹಕ್ಕು ಅಧಿಕೃತ ಅಧಿಕಾರಿಯವರಿಗಿರುತ್ತದೆ. ಈ ಕುರಿತು ಹೆಚ್ಚಿನ ವಿವರಗಳನ್ನು ಈ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

**SCHEDULE**

| Unit No. | Particulars | Name of the Research Range | Supply of 100 cc Root Trainers Block of 40 cells | App. Value (in lakhs) | EMD | Work completion date |
|---|---|---|---|---|---|---|
| 1 | Root Trainer | Bangalore | 2500 | 2.00 | 5000.00 | From the date of agreement works should be completed within 45 days or before 18.1.2005 whichever is earlier |
| 2 | Root Trainer Stand | Bangalore | 188 | 0.376 | 940.00 | |
| 3 | Root Trainer | Mandya | 2500 | 2.00 | 5000.00 | |
| 4 | Root Trainer Stand | Mandya | 188 | 0.376 | 940.00 | |
| 5 | Root Trainer | Hoskote | 2500 | 2.00 | 5000.00 | |
| 6 | Root Trainer Stand | Hoskote | 188 | 0.376 | 940.00 | |
| 7 | Root Trainer | Tumkur | 2500 | 2.00 | 5000.00 | |
| 8 | Root Trainer Stand | Tumkur | 188 | 0.376 | 940.00 | |
| 9 | Root Trainer | Kolar | 2500 | 2.00 | 5000.00 | |
| 10 | Root Trainer Stand | Kolar | 188 | 0.376 | 940.00 | |

**ನಿಬಂಧನೆಗಳು**

1. ಟೆಂಡರ್ ಫಾರಂಗಳನ್ನು ಪ್ರತಿ ಫಾರಂಗೆ ರೂ. 200.00 (ತೆರಿಗೆ ಸೇರಿ) ರಂತೆ ಪಾವತಿ ಮಾಡಿ ದಿನಾಂಕ: 4.1.2005 ರಂದು ಕಛೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದು ಮತ್ತು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2004-2005ನೇ ಸಾಲಿಗೆ ತಮ್ಮ ಹೆಸರನ್ನು ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರಬೇಕು. ತಪ್ಪಿದಲ್ಲಿ ಅಂತಹವರ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ, ಬ್ಲಾಕ್ ಲಿಸ್ಟ್‌ನಲ್ಲಿರುವವರು, ಸಾಲ ತೀರಿಸಲಾಗದವರು, ನ್ಯಾಯಾಲಯಗಳಿಂದ ದೋಷಿಗಳು ಎಂದು ಘೋಷಿಸಲ್ಪಟ್ಟವರು, ಬುದ್ಧಿ ಸ್ಥಿಮಿತರಿಲ್ಲದವರನ್ನು ಗುತ್ತಿಗೆದಾರರಾಗಿ ನೋಂದಾಯಿಸಿಕೊಳ್ಳಲಾಗುವುದಿಲ್ಲ ಮತ್ತು ಅಂತಹವರ ಟೆಂಡರ್‌ನ್ನು ಯಾವುದೇ ಕಾರಣ ಕೊಡದೇ ತಿರಸ್ಕರಿಸಲಾಗುವುದು. ಯಾವುದೇ ಷರತ್ತು ಹಾಕಿದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.

2. ಪ್ರತಿಯೊಂದು ಯೂನಿಟ್‌ಗೆ ಟೆಂಡರ್‌ಗಳನ್ನು ಪ್ರತ್ಯೇಕವಾಗಿ ಸಲ್ಲಿಸಬೇಕು.
3. ರೂಟ್‌ಟ್ರೈನರ್ ಬ್ಲಾಕ್‌ನ ಅಳತೆ 100 ಸಿಸಿ ಇದ್ದು 40 ಹೋಲ್ಸ್ ಇರುವಂತಹ ರೂಟ್ ಟ್ರೈನರ್‌ಗಳ ಕನಿಷ್ಠ ದರವನ್ನು ಮಾತ್ರ ತೆರಿಗೆಗಳು ಸೇರಿದಂತೆ ಟೆಂಡರ್‌ನಲ್ಲಿ ನಮೂದಿಸಿರಬೇಕು.
4. ದರವನ್ನು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ನಮೂದಿಸಿರಬೇಕು. ಇವೆರಡರಲ್ಲಿ ವ್ಯತ್ಯಾಸ ಬಂದಲ್ಲಿ ಯಾವುದು ಕಡಿಮೆಯೋ ಆ ದರಗಳನ್ನು ಪರಿಗಣಿಸಲಾಗುವುದು. ಟೆಂಡರ್ ಫಾರಂನಲ್ಲಿ ಎಲ್ಲಾ ಕಾಲಂಗಳನ್ನು ತುಂಬಿ ಸಹಿ ಮಾಡಿರಬೇಕು. ತಿದ್ದುಪಡಿಗಳನ್ನು ಪೂರ್ಣ ಸಹಿಯ ಮೂಲಕ ದೃಢೀಕರಿಸಬೇಕು.
5. ಪ್ರತಿಯೊಂದು ಟೆಂಡರ್‌ಗೆ ಪತ್ಯೇಕವಾಗಿ ಸಂಚಕಾರ ಠೇವಣಿ (ಇ.ಎಂ.ಡಿ) ಯನ್ನು ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಿಂದ ಡಿ.ಡಿ ತೆಗೆದು ಲಗತ್ತಿಸಿರಬೇಕು. ಸಂಚಕಾರ ಠೇವಣಿಗೆ ಬಡ್ಡಿ ನೀಡಲಾಗುವುದಿಲ್ಲ.
6. ಟೆಂಡರ್ ಫಾರಂಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ಇಟ್ಟು, ಲಕೋಟೆಯ ಮೇಲ್ಭಾಗದಲ್ಲಿ "ರೂಟ್ ಟ್ರೈನರ್ಸ್ ಮತ್ತು ರೂಟ್ ಟ್ರೈನರ್ಸ್ ಸ್ಟಾಂಡ್ ಸರಬರಾಜಿಗಾಗಿ" ಎಂದು ಸ್ಪಷ್ಟವಾಗಿ ನಮೂದಿಸಿ, ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರಿಗೆ ಹೆಸರಿಗೆ ವಿಳಾಸಿಸಿ ಇದನ್ನು ನಿಗದಿತ ಪೆಟ್ಟಿಗೆಯಲ್ಲಿ ದಿನಾಂಕ: 4.1.2005 ರಂದು ಮದ್ಯಾಹ್ನ 4.00 ಗಂಟೆಯೊಳಗೆ ಹಾಕಬೇಕು.
7. ಟೆಂಡರ್‌ಗಳನ್ನು ಅದೇ ದಿನ 4.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆದು ವಿವಿಧ ಟೆಂಡರ್‌ದಾರರು ಯೂನಿಟ್‌ವಾರು ಪ್ರಸ್ತಾಪಿಸಿದ ದರವನ್ನು ಬಹಿರಂಗಪಡಿಸಲಾಗುವುದು.
8. ಬಂದ ದರಗಳಲ್ಲಿ ಅತೀ ಕಡಿಮೆ ದರವನ್ನು ಸಾಮಾನ್ಯವಾಗಿ ಅಂಗೀಕರಿಸಲಾಗುವುದು. ಒಂದೇ ದರವನ್ನು ಪ್ರಸ್ತಾಪಿಸಿ, ಒಂದಕ್ಕಿಂತ ಹೆಚ್ಚಿನ ಟೆಂಡರ್ ಬಂದಲ್ಲಿ ಅವುಗಳನ್ನು ಸಂಬಂಧಿಸಿದ ಟೆಂಡರ್‌ದಾರರ ಅಂಗೀಕಾರದೊಂದಿಗೆ ಸೂಕ್ತ ರೀತಿಯಲ್ಲಿ ಪರಸ್ಪರ ಒಪ್ಪಂದ (ನೆಗೋಷಿಯೇಷನ್) ಮೂಲಕ ಅಂದರೆ ಅತೀ ಕಡಿಮೆ ಬೆಲೆ ಕೊಡುವ ಆಧಾರದ ಮೇಲೆ ವಿಲೇವಾರಿ ಮಾಡಲಾಗುವುದು. ಈ ವಿಷಯದಲ್ಲಿ ಅರಣ್ಯ ಕೃಷಿಕರ ನಿರ್ಧಾರ ಅಂತಿಮವಾಗಿರುತ್ತದೆ.
9. ಅಸಫಲರಾದ ಟೆಂಡರ್‌ದಾರರ (2ನೇ ಕನಿಷ್ಠ ದರ ಪ್ರಸ್ತಾಪಿಸಿದವರನ್ನು ಹೊರತುಪಡಿಸಿ) ಸಂಚಕಾರ ಠೇವಣಿಯನ್ನು ಅಂದೇ ಅವರ ಅರ್ಜಿಯ ಮೇಲೆ ಹಿಂದಿರುಗಿಸಲಾಗುವುದು. ಇನ್ನುಳಿದ ಇ.ಎಂ.ಡಿ. ಗಳನ್ನು ಮುಂದೆ ಭದ್ರತಾ ಠೇವಣಿಯಾಗಿ ಮಾರ್ಪಡಿಸಲಾಗುವುದು. ಮೊದಲನೆಯದಾಗಿ ಸಫಲರಾದ ಟೆಂಡರ್‌ದಾರರ ಕರಾರು ಪತ್ರವನ್ನು ಮಾಡಿಕೊಂಡನಂತರ 2ನೆಯ ಕನಿಷ್ಠ ದರದ ಟೆಂಡರ್‌ದಾರರ ಸಂಚಕಾರ ಠೇವಣಿಯನ್ನು ಹಿಂದಿರುಗಿಸಲಾಗುವುದು.
10. ಟೆಂಡರ್ ಫಲಿತಾಂಶವನ್ನು ಟೆಂಡರ್ ನಡೆಸಿದ ದಿನಾಂಕದಿಂದ 15 ದಿನಗಳೊಳಗೆ ಲಿಖಿತ ರೂಪದಲ್ಲಿ ತಿಳಿಸಲಾಗುವುದು. ತಿಳಿಸಿದ 7 ದಿನಗಳೊಳಗೆ ಸಫಲರಾದ ಟೆಂಡರ್‌ದಾರರು ನಿಗದಿತ ಮೌಲ್ಯದ ಸ್ಟ್ಯಾಂಪ್ ಪೇಪರ್‌ನಲ್ಲಿ ಕರಾರು ಪತ್ರವನ್ನು ಮಾಡಿಕೊಳ್ಳಬೇಕು. ಇಲ್ಲದಿದ್ದಲ್ಲಿ ಅವರು ಅನಾಸಕ್ತರೆಂದು ತಿಳಿದು ಅವರ ಗುತ್ತಿಗೆಯನ್ನು ಯಾವುದೇ ಕಾರಣ ನೀಡದೇ ರದ್ದುಪಡಿಸಲಾಗುವುದು.
11. ಮೊದಲನೇ ಟೆಂಡರ್‌ದಾರರು ಸಫಲರಾಗಿದ್ದು, ನಿಗದಿತ ಅವಧಿಯಲ್ಲಿ ಕರಾರು ಮಾಡಿಕೊಳ್ಳತಕ್ಕದ್ದು, ತಪ್ಪಿದಲ್ಲಿ 2ನೇ ಅತೀ ಕಡಿಮೆದರದ ಟೆಂಡರ್‌ದಾರರು ಕರಾರು ಮಾಡಿಕೊಂಡು ಕಾರ್ಯಾರಂಭ ಮಾಡಲು ಅರ್ಹರಾಗಿರುತ್ತಾರೆ. ಕರಾರು ಮಾಡಿಕೊಂಡ ನಂತರ ಇವರ ಇ.ಎಂ.ಡಿ. ಯನ್ನು ಭದ್ರತಾ ಠೇವಣಿಯಾಗಿ ಮಾರ್ಪಾಡು ಮಾಡಿಕೊಳ್ಳಲಾಗುವುದು ಹಾಗೂ ಮೊದಲನೇ ಟೆಂಡರ್‌ದಾರರ ಗುತ್ತಿಗೆಯನ್ನು ವಜಾ ಮಾಡಲಾಗುವುದು. ಮತ್ತು ಇ.ಎಂ.ಡಿ.ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
12. ಯಾವುದೇ ಕಾರಣಕ್ಕೂ ಗುತ್ತಿಗೆ ವರ್ಗಾವಣೆಯನ್ನು ನಿಷೇಧಿಸಿದೆ.
13. ಗುತ್ತಿಗೆಯ ಪೂರ್ಣ ಪ್ರಮಾಣದ ರೂಟ್ ಟ್ರೈನರ್ ಮತ್ತು ರೂಟ್ ಟ್ರೈನರ್ ಸ್ಟಾಂಡ್‌ಗಳನ್ನು ತಯಾರಿಸಿ ಕರಾರು ಪತ್ರ ಸಹಿ ಮಾಡಿದ ದಿನದಿಂದ 45 ದಿನಗಳೊಳಗೆ ಅಥವಾ ದಿನಾಂಕ: 31.3.2005 ರ ಮೊದಲು, ಇದರಲ್ಲಿ ಯಾವುದು ಮೊದಲೊ ಅದರಂತೆ ಸಾಮಗ್ರಿಗಳನ್ನು ಸರಬರಾಜು ಮಾಡತಕ್ಕದ್ದು ಇದಕ್ಕೆ ಸಮಯದ ವಿಸ್ತರಣೆ ಇರುವುದಿಲ್ಲ.
14. ಒದಗಿಸಿದ ರೂಟ್ ಟ್ರೈನರ್ ಮತ್ತು ರೂಟ್ ಟ್ರೈನರ್ ಸ್ಟಾಂಡ್‌ಗಳ ಗುಣಮಟ್ಟವನ್ನು ಅರಣ್ಯ ಕೃಷಿಕರು ಅಥವಾ ಅವರಿಂದ ನೇಮಿಸಲ್ಪಟ್ಟವರು ಪರೀಕ್ಷಿಸುವರು. ಗುಣಮಟ್ಟ ಅಥವಾ ಗಾತ್ರದಲ್ಲಿ ವ್ಯತ್ಯಾಸವಿದ್ದಲ್ಲಿ ಪೂರ್ತಿ ಮಾಲನ್ನು ತಿರಸ್ಕರಿಸಲಾಗುವುದು. ಇದಕ್ಕೆ ಯಾವುದೇ ಪರಿಹಾರವನ್ನು ಕೊಡಲಾಗುವುದಿಲ್ಲ. ಒಪ್ಪಿಕೊಂಡ ಪ್ರಮಾಣಕ್ಕೆ ಬಿಲ್ಲುಗಳನ್ನು ಪರೀಕ್ಷಾಧಿಕಾರಿಗಳು ದೃಢೀಕರಿಸಿದ ನಂತರ ಹಣ ಪಾವತಿಸಲು ಕ್ರಮ ಕೈಗೊಳ್ಳಲಾಗುವುದು.
15. ಗುತ್ತಿಗೆದಾರರು ದೃಢೀಕೃತ ಬಿಲ್ಲುಗಳನ್ನು ಹಣ ಪಾವತಿಗಾಗಿ ಸಂಬಂಧಿಸಿದ ಅರಣ್ಯ ಕೃಷಿಕರಿಗೆ ಸಲ್ಲಿಸಬೇಕು. ಇದನ್ನು ಸರ್ಕಾರದಿಂದ ಬಿಡುಗಡೆಯಾಗುವ ಅನುದಾನದ ಲಭ್ಯತೆಗೊಳಪಟ್ಟು ಪಾವತಿಸಲಾಗುವುದು. ಬಿಲ್ಲಿನ ನಿಯಮಾನುಸಾರ ಹಣದಲ್ಲಿ ಅನ್ವಯವಾಗುವಂತಹ ಮಾರಾಟ ತೆರಿಗೆ, ಆದಾಯ ತೆರಿಗೆ ಮತ್ತು ಇತರೆ ತೆರಿಗೆಗಳನ್ನು ಮುರಿದುಕೊಳ್ಳಲಾಗುವುದು. ವಹಿಸಿದ ಕೆಲಸಕ್ಕೆ ಯಾವುದೇ ಕಾರಣಕ್ಕೂ ಮುಂಗಡ ಹಣ ನೀಡಲಾಗುವುದಿಲ್ಲ, ಹಾಗೂ ಬಾಕಿ ಬಿಲ್ಲುಗಳ ಮೇಲೆ ಬಡ್ಡಿ ಕೊಡುವುದಿಲ್ಲ.
16. ಗುಣಮಟ್ಟ ಮತ್ತು ಪರಿಮಾಣವನ್ನು ಒಪ್ಪಿಕೊಳ್ಳುವುದು ಅಥವಾ ತಿರಸ್ಕರಿಸುವುದು ಅರಣ್ಯ ಕೃಷಿಕರ ವಿಚಕ್ಷಣೆಗೆ ಒಳಪಟ್ಟಿರುತ್ತದೆ.
17. ಯಾವುದೇ ಕರಾರು ನಿಯಮಗಳನ್ನು ಉಲ್ಲಂಘಿಸಿದಲ್ಲಿ ಅವರ ಗುತ್ತಿಗೆಯನ್ನು ರದ್ದು ಮಾಡುವುದು ಸಂಬಂಧಿಸಿದ ಅರಣ್ಯ ಕೃಷಿಕರ ವಿಚಕ್ಷಣೆಗೆ ಒಳಪಟ್ಟಿರುತ್ತದೆ. ಮತ್ತು ಅವರ ಜವಾಬ್ದಾರಿ ಮೇಲೆ ಗುತ್ತಿಗೆಯನ್ನು ಇನ್ನೊಬ್ಬರಿಗೆ ವಹಿಸಬಹುದಾಗಿದೆ. ಇದರಿಂದ ಸರ್ಕಾರಕ್ಕೆ ಸಂಭವಿಸಬಹುದಾದ ನಷ್ಟವನ್ನು ಅವರ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಮಾಡಿಕೊಳ್ಳುವುದರ ಮೂಲಕ ಅಥವಾ ಇನ್ನಾವುದೇ ರೀತಿಯಲ್ಲಿ ನಿಯಮದ ಮೂಲಕ ವಸೂಲು ಮಾಡಲಾಗುವುದು.
18. ಯಾವುದೇ ವಿಷಯದಲ್ಲಿ ತಕರಾರು ಬಂದಲ್ಲಿ, ಮೇಲ್ಮನವಿಗಳನ್ನು ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಶೋಧನೆ ಮತ್ತು ಬಳಕೆ ವೃತ್ತ, ಬೆಂಗಳೂರು ರವರಿಗೆ ಸಲ್ಲಿಸಬಹುದು. ಇದರ ಬಗ್ಗೆ ಅಂತಿಮ ನಿರ್ಧಾರ ಅರಣ್ಯ ಸಂರಕ್ಷಣಾಧಿಕಾರಿಗಳವರದೇ ಆಗಿರುತ್ತದೆ.
19. ಟೆಂಡರ್‌ನ್ನು ಕಂಪನಿಯ ವತಿಯಿಂದ ಕೊಡುವ ಪಕ್ಷದಲ್ಲಿ
   ಅ) ಕಂಪನಿಯು ನಿಯಮಿತ ಅಥವಾ ನೋಂದಾಯಿತ ಕಂಪನಿಯಾಗಿರಬೇಕು.
   ಆ) ಕಂಪನಿಯು ಎಲ್ಲಾ ಪಾಲುದಾರರಿಗೆ ಟೆಂಡರ್‌ನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ, ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (Power of Attorney) ಪಡೆದುಕೊಂಡವನಾಗಿರಬೇಕು. ಇಂತಹ ಪತ್ರವನ್ನು ಟೆಂಡರ್‌ಗೆ ಲಗತ್ತಿಸಬೇಕು.

20. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಮಾಡಿಕೊಂಡ ನಂತರ ಟೆಂಡರ್‌ನ್ನು ಹಿಂತೆಗೆದುಕೊಂಡಲ್ಲಿ, ನಿಗದಿತ ಸಮಯದಲ್ಲಿ ಸರಬರಾಜು ಪ್ರಾರಂಭಿಸದಿದ್ದಲ್ಲಿ, ಸರಬರಾಜಿನ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಅಂತಹ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು. ಇಂತಹ ಮರು ಟೆಂಡರ್‌ನಲ್ಲಿ ಸರ್ಕಾರಕ್ಕೆ ಹಾನಿಯಾದ ಪಕ್ಷದಲ್ಲಿ ಅಂತಹ ಹಾನಿಯ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963ರ ಕಾಲಂ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.

21. ಸರಬರಾಜು ಪೂರ್ಣಗೊಂಡ ದಿನಾಂಕದಿಂದ 1 ವರ್ಷದ ಒಳಗಾಗಿ ಸರಬರಾಜಿನಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುವುದು. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು ಅಥವಾ ದೋಷ ಸರಿಪಡಿಸದಿದ್ದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.

22. ಟೆಂಡರ್ ಪ್ರಕಟಣೆಯಲ್ಲಿ ಸರಬರಾಜು ಮಾಡಬೇಕಾದ ಪರಿಮಾಣವನ್ನು ನಮೂದಿಸಿದ್ದರೂ, ಇದರಲ್ಲಿ ಹೆಚ್ಚು ಅಥವಾ ಕಡಿಮೆಯನ್ನು ಮಾಡುವ ಅಧಿಕಾರವನ್ನು ಅರಣ್ಯ ಕೃಷಿಕರು ಹೊಂದಿರುತ್ತಾರೆ.

23. ಸರಬರಾಜು ಮಾಡುವ ಸಾಮಗ್ರಿಗಳ ಗುಣಮಟ್ಟದ ಪರೀಕ್ಷಾ ದೃಢೀಕರಣ ಪತ್ರವನ್ನು ಅನುಮೋದಿತ ಯಾವುದೇ ಸರ್ಕಾರದ ಪ್ರಯೋಗಾಲಯದಿಂದ ಪಡೆದು ಹಾಜರುಪಡಿಸುವುದು.

24. ಸರಬರಾಜಿನ ತಾಂತ್ರಿಕ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.

25. ಪ್ರತಿ ಟೆಂಡರ್‌ದಾರರು ಮೇಲಿನ ಸರಬರಾಜನ್ನು ನಿರ್ವಹಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.

ಪಿ.ಆರ್. 554 ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು.

**ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ದೊರೆಸಾನಿಪಾಳ್ಯ, ಬೆಂಗಳೂರು-560 076**

**ಮೂರನೇ ಬಾರಿಗೆ ಮರು ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ2-ಬಿಯುಡಿ-ಸಿಆರ್-54:2004-05, ದಿನಾಂಕ: 3ನೇ ಡಿಸೆಂಬರ್ 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2004-2005ನೇ ಸಾಲಿಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ವಿಭಾಗದ ವ್ಯಾಪ್ತಿಗೊಳಪಟ್ಟಿರುವ ವಲಯಗಳಲ್ಲಿ ಅರಣ್ಯ ಸಂಶೋಧನಾ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಈ ವಿಭಾಗದಲ್ಲಿ 2004-2005ನೇ ಸಾಲಿಗೆ ನೋಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಸದರಿ ಕಾಮಗಾರಿಗೆ ಟೆಂಡರ್ ಕರೆಯಲಾಗಿದೆ.

ದಿನಾಂಕ: 4.1.2005 ರಂದು ಅಪರಾಹ್ನ 3.00 ಗಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು. ಅದೇ ದಿನ ಕೆಳಗೆ ಸಹಿ ಮಾಡಿದವರು ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು ಅಪರಾಹ್ನ 4.00 ಗಂಟೆಗೆ ತೆರೆಯುವರು ಮತ್ತು ಸದರಿ ದಿನಾಂಕದಂದು ಯಾವುದೇ ಟೆಂಡರ್‌ದಾರರು ಬಾರದೆ ಇದ್ದಲ್ಲಿ ಅಥವಾ ಯಾವುದೇ ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 12.1.2005 ರಂದು ಅಪರಾಹ್ನ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಮತ್ತು ಟೆಂಡರ್ ಲಕೋಟೆಯನ್ನು ಅಂದೇ ಅಪರಾಹ್ನ 4.00 ಗಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ವಲಯ | ಕಾಮಗಾರಿಗಳ ಇವರ | ಭೌತಿಕ ಪರಿಮಾಣ ಸಂಖ್ಯೆ | ಅಂದಾಜು ಮೊತ್ತ | ನಿಗದಿಪಡಿಸಿದ ಇಎಂಡಿ ಮೊತ್ತ | ಕೆಲಸ ಮುಗಿಸುವ ದಿನಾಂಕ | ಕೆಲಸದ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ತುಮಕೂರು | 1) ಮಿಸ್ಟ್ ಚೇಂಬರ್ | 1 | 3.00 | 7500.00 | 31.3.05 | Mist chamber of 20Mx7.5M size with arch shaped roof having an area of 150 sq.m. The basic structure of mist chamber would be made out of metallic frame fixed on the ground supported by a one-foot parapet wall of bricks having 9 inches thickness. The structure will be covered with ultraviolet rays stabilized 200 microns thick IPCL polythene sheet. Inside the mist chamber, brick walls and columns have to be constructed at a height of 60-70 cms from the ground level to keep the root trainer trays along with the metal stands. Water sprinklers have to be fixed at an interval of 1.5 mts. in each stand. The mist chamber of size 150 sqm. Will have TWO cooling pads, and ONE exhaust fan. |

| ಕ್ರ. ಸಂ. | ವಲಯ | ಕಾಮಗಾರಿಗಳ ಇವರ | ಭೌತಿಕ ಪರಿಮಾಣ ಸಂಖ್ಯೆ | ಅಂದಾಜು ಮೊತ್ತ | ನಿಗದಿಪಡಿಸಿದ ಇಎಂಡಿ ಮೊತ್ತ | ಕೆಲಸ ಮುಗಿಸುವ ದಿನಾಂಕ | ಕೆಲಸದ ವಿವರ |
|---|---|---|---|---|---|---|---|
| 3 | ಹೊಸಕೋಟೆ | 1) ಶೇಡ್ ನೆಟ್ | 1 | 1.00 | 2500.00 | 31.3.05 | The size of shade house recommended is 15m x 10m x 2.5m height. Metallic frame work of the above dimension is made with the flat roof. Green shade 50% net of 150 square meters would be used to cover the metallic framework. |
| 4 | ಕೋಲಾರ | 1) ಶೇಡ್ ನೆಟ್ | 1 | 1.00 | 2500.00 | 31.3.05 | -"- |
| | ಕೋಲಾರ | 2) ಮಿಸ್ಟ್ ಚೇಂಬರ್ | 1 | 3.00 | 7500.00 | 31.3.05 | Mist chamber of 20M x 7.5M size with arch shaped roof having an area of 150 sq.m. The basic structure of mist chamber would be made out of metallic frame fixed on the ground supported by a one-foot parapet wall of bricks having 9 inches thickness. The structure will be covered with ultraviolet rays stabilized 200 microns thick IPCL polythene sheet. Inside the mist chamber, brick walls and columns have to be constructed at a height of 60-70 cms from the ground level to keep the root trainer trays along with the metal stands. Water sprinklers have to be fixed at an interval of 1.5 mts. in each stand. The mist chamber of size 150 sqm. Will have TWO cooling pads, and ONE exhaust fan. |
| 5 | ಮಂಡ್ಯ | 1) ಮಿಸ್ಟ್ ಚೇಂಬರ್ | 1 | 3.00 | 7500.00 | 31.3.05 | -"- |
| | | 2) ಸ್ಟೋರ್ ರೂಮ್ | 1 | 1.00 | 2500.00 | 31.3.05 | ಸ್ಟೋರ್ ರೂಮ್ ನಿರ್ಮಾಣದ ಅಳತೆ 4 x 8 ಮೀಟರ್ಸ್ |
| | | 3) ವರ್ಕ್ ಮ್ಯಾನ್ ಶೆಡ್ | 1 | 1.00 | 2500.00 | 31.3.05 | ವರ್ಕ್‌ಮ್ಯಾನ್ ಶೆಡ್ ನಿರ್ಮಾಣದ ಅಳತೆ 12 x 7.5 ಮೀಟರ್ಸ್ |

ಟೆಂಡರ್ ನಮೂನೆಗಳನ್ನು ದಿನಾಂಕ: 4.1.2005 (ರಜಾ ದಿನ ಬಿಟ್ಟು) ಅಪರಾಹ್ನ 1.00 ಗಂಟೆವರೆಗೆ ಕಛೇರಿ ವೇಳೆಯಲ್ಲಿ ನೀಡಲಾಗುವುದು. ಒಂದು ಟೆಂಡರ್ ಫಾರಂನ ಬೆಲೆ ರೂ. 200.00 (ತೆರಿಗೆ ಸೇರಿ). ಒಂದೊಂದು ಕೆಲಸಕ್ಕೆ ಸಂಚಕಾರ ಠೇವಣಿಯನ್ನು ಡಿಡಿ ರೂಪದಲ್ಲಿ ಶೆಡ್ಯೂಲ್ ಕಾಲಂ ಸಂಖ್ಯೆ: 6 ರಲ್ಲಿರುವಂತೆ ಪ್ರತ್ಯೇಕವಾಗಿ ಪಡೆದು ಟೆಂಡರ್ ನಮೂನೆಯೊಂದಿಗೆ ಲಗತ್ತಿಸಬೇಕು. ಹೆಚ್ಚಿನ ವಿವರಗಳಿಗೆ ಈ ಕಛೇರಿಯನ್ನು ಕಛೇರಿಯ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ ಮತ್ತು ಎರಡನೇ ಬಾರಿಗೆ ಟೆಂಡರ್ ನಡೆಯಬಹುದಾದ ಸಂಭವವಿದ್ದಲ್ಲಿ ಟೆಂಡರ್ ನಮೂನೆಯನ್ನು ದಿನಾಂಕ: 12.1.2005 ರ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದಾಗಿದೆ.

**ನಿಬಂಧನೆಗಳು**

1. ಟೆಂಡರ್ ಫಾರಂಗಳನ್ನು ಪ್ರತಿ ಫಾರಂಗೆ ರೂ. 200.00 (ತೆರಿಗೆ ಸೇರಿ) ರಂತೆ ಪಾವತಿ ಮಾಡಿ ದಿನಾಂಕ: 17.12.2004 ಕಛೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದು ಮತ್ತು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛಿಯುಳ್ಳವರು ಈ ವಿಭಾಗದಲ್ಲಿ 2004-2005ನೇ ಸಾಲಿಗೆ ತಮ್ಮ ಹೆಸರನ್ನು ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರಬೇಕು. ತಪ್ಪಿದಲ್ಲಿ ಅಂತಹವರ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ,
2. ಮಿಸ್ಟ್ ಚೇಂಬರ್, ಗ್ರೀನ್ ಹೌಸ್ ನಿರ್ಮಾಣ ಅತ್ಯಂತ ತಾಂತ್ರಿಕ ಕಾಮಗಾರಿಯಾಗಿರುವುದರಿಂದ "ಕರ್ನಾಟಕ ಸಂಗ್ರಹಣಗಳಲ್ಲಿ ಪಾರದರ್ಶಕತೆ ಕಾಯ್ದೆ 1999" ಕಲಂ 27(ಎ) ದಂತೆ ಮಿಸ್ಟ್ ಚೇಂಬರ್ ಮತ್ತು ಗ್ರೀನ್ ಹೌಸ್ ನಿರ್ಮಾಣ ಮಾಡಿ ಅನುಭವ ಇರುವ ಗುತ್ತಿಗೆದಾರರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ. ಟೆಂಡರ್ ಫಾರಂ ಅನ್ನು ಪಡೆಯುವ ಸಮಯದಲ್ಲಿ ಅನುಭವದ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ವಲಯವಾರು ಮತ್ತು ಕೆಲಸವಾರು ಮೊಹರು ಮಾಡಿದ ಲಕೋಟೆಯಲ್ಲಿ ಪ್ರತ್ಯೇಕವಾಗಿ ಸಲ್ಲಿಸುವುದು.
4. ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು 4.1.2005 ರಂದು ಅಪರಾಹ್ನ 3.00 ಗಂಟೆಯವರೆಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಯಾವುದೇ

ಕಾರಣದಿಂದಾಗಿ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ; 12.1.2005 ರಂದು ಅಪರಾಹ್ನ 3.00 ಗಂಟೆಯವರೆಗೆ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.

5. ಈ ಸದರಿ ಕಾಮಗಾರಿಗಳು ಕಾಲಬದ್ಧ ಕೆಲಸಗಳಾಗಿದ್ದು, ಒಂದು ಪಕ್ಷ ಯಾವುದಾದರೂ ವಲಯದಲ್ಲಿ ಟೆಂಡರ್‌ಗೆ ಮುಂಚೆ ಯಾವುದಾದರೂ ಕೆಲಸಗಳನ್ನು ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳು ಈ ಪ್ರಕಟಣೆಯಿಂದ ಹೊರತುಪಡಿಸಿದವುಗಳಾಗಿರುತ್ತವೆ ಮತ್ತು ಸ್ಥಳ ಬದಲಾವಣೆಯಾದರೂ ಸಹಾ ಕೆಲಸಗಳನ್ನು ಗುರುತುಪಡಿಸಿಕೊಟ್ಟ ಸ್ಥಳದಲ್ಲಿ ಪೂರ್ಣಗೊಳಿಸಬೇಕಾಗುತ್ತದೆ.
6. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.
7. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗದಿಪಡಿಸಿರುವ ಇಎಂಡಿ ಮೊತ್ತಕ್ಕೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು [Silviculturist, Central Zone, Bangalore] ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ.
8. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅಂತಹವನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನಾ ವೃತ್ತ ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.
9. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
10. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರು ಕಾಯ್ದಿರಿಸಿಕೊಂಡಿರುತ್ತಾರೆ.
11. ಟೆಂಡರ್‌ನಲ್ಲಿ ಯಶಸ್ವಿಯಾದ ಗುತ್ತಿಗೆದಾರರಿಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರಿಂದ ತಿಳುವಳಿಕೆ ನೀಡಿದ 7 ದಿವಸಗಳ ಒಳಗಾಗಿ ನಿರ್ದಿಷ್ಟ ನಮೂನೆಯಲ್ಲಿ ಕರಾರು ನಾಮೆಯನ್ನು ಸಹಿ ಮಾಡತಕ್ಕದ್ದು. ಈ ಅವಧಿಯನ್ನು ವಿಸ್ತರಿಸುವ ಅಧಿಕಾರ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರು ಹೊಂದಿರುತ್ತಾರೆ.
12. ಈ ಮೇಲಿನ ಕಾಮಗಾರಿ ಅನುಷ್ಠಾನ ಸಂಬಂಧ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಸರ್ಕಾರದಿಂದ ಬಿಡುಗಡೆಗೊಳ್ಳುವ ಅನುದಾನ ಹಾಗೂ ಅನುಮೋದನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
13. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂಬಿ) ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಆದಾಯ ತೆರಿಗೆ, ಮಾರಾಟ ತೆರಿಗೆ, ಸರ್ ಚಾರ್ಜ್ ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
14. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳು, ಸಂಶೋಧನಾ ಪ್ಲಾಟುಗಳನ್ನು ಹಾಳು ಮಾಡಿದಲ್ಲಿ, ಗಿಡ : ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನಿನ ಕ್ರಮ ಜಾರಿಗೊಳಿಸಲಾಗುವುದು.
15. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
16. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡೀಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
17. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಬೇಕು. ಇಲಾಖೆಯು ಗುತ್ತಿಗೆದಾರರ ಯಾವುದೇ ನಷ್ಟ ಇತ್ಯಾದಿಗಳಿಗೆ ಜವಾಬ್ದಾರರಲ್ಲ.
18. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ಪಟ್ಟಿಗಳ ಅಂದಾಜು ದರವಾಗಿರುತ್ತದೆ (ಅಪ್ರಾಕ್ಸಿಮೇಟ್). ಹಣವನ್ನು ಪಾವತಿಸುವಾಗ ಕರ್ನಾಟಕ ಲೋಕೋಪಯೋಗಿ ಇಲಾಖೆಯಿಂದ ಅಂದಾಜು ಪೂರ್ಣ ತಾಂತ್ರಿಕ ಪರಿಶೀಲನೆಗೆ ಒಳಪಟ್ಟ ದರಗಳಿಗೆ ಮತ್ತು ಯಾವುದೇ ಐಟಂ ಎಸ್.ಆರ್. ನಲ್ಲಿ ಇಲ್ಲದಿದ್ದಲ್ಲಿ ಪ್ರಖ್ಯಾತ / ಉತ್ತಮ ಮಟ್ಟದ ಕಂಪನಿಗಳಿಂದ ಪಡೆದ ನಿರ್ದಿಷ್ಟ ಬೆಲೆಯ ಬಿಲ್ಸ್‌ಗಳಿಗೆ ಸೀಮಿತಗೊಳಿಸಲಾಗುವುದು.
19. ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆ ಅಥವಾ ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ನಕಾಶೆ ಅಂದಾಜು ಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ಸಂಶೋಧನಾ ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯ ಕೃಷಿಕರು ಅಥವಾ ಅರಣ್ಯ ಕೃಷಿಕರು ಇವರು ಕಾಲಕಾಲಕ್ಕೆ ನೀಡುವ ಲಿಖಿತ ಅಥವಾ ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು. ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಅರಣ್ಯ ಕೃಷಿಕರ ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ಧರಿರುತ್ತಾರೆ.
20. ಯೋಜನೆಯು ಮುಕ್ತಾಯ ಹಂತದಲ್ಲಿರುವುದರಿಂದ ನಿಗದಿತ ಸಮಯದ ಒಳಗೆ ಕಾಮಗಾರಿಯನ್ನು ದಿನಾಂಕ: 25.1.2005 ರ ಒಳಗೆ ಪೂರ್ಣಗೊಳಿಸತಕ್ಕದ್ದು. ಗುತ್ತಿಗೆಯ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ಅತಿ ವಿಶೇಷ ಸಂದರ್ಭಗಳಲ್ಲಿ ವಿಸ್ತರಣಾ ಅವಧಿಯಲ್ಲಿ ಮಾಡಿದ ಕೆಲಸಗಳಿಗೆ ಗುತ್ತಿಗೆ ದರಗಳಲ್ಲಿ ಶೇ. 5 ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಅರಣ್ಯ ಕೃಷಿಕರು ಹೊಂದಿರುತ್ತಾರೆ. 31.3.2005 ರ ಒಳಗೆ ಕಾಮಗಾರಿಯನ್ನು ಪೂರ್ಣಗೊಳಿಸದಿದ್ದಲ್ಲಿ ಅಂತಹ ಕಾಮಗಾರಿಗಳಿಗೆ ಹಣವನ್ನು ಪಾವತಿಸಲಾಗುವುದಿಲ್ಲ ಮತ್ತು ಇಎಂಡಿ ಹಾಗೂ ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
21. ಟೆಂಡರ್‌ನ್ನು ಕಂಪನಿಯ ವತಿಯಿಂದ ಕೊಡುವ ಪಕ್ಷದಲ್ಲಿ
    ಅ) ಕಂಪನಿಯು ನಿಯಮಿತ ಅಥವಾ ನೋಂದಾಯಿತ ಕಂಪನಿಯಾಗಿರಬೇಕು.
    ಆ) ಕಂಪನಿಯು ಎಲ್ಲಾ ಪಾಲುದಾರರಿಗೆ ಟೆಂಡರ್‌ನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ, ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (Power of Attorney) ಪಡೆದುಕೊಂಡವನಾಗಿರಬೇಕು. ಇಂತಹ ಪತ್ರವನ್ನು ಟೆಂಡರ್‌ಗೆ ಲಗತ್ತಿಸಬೇಕು.

22. ಅರಣ್ಯ ಕೂಲಿಕಾರರ ಸಹಕಾರ ಸಂಘಗಳ ಈ ಕೆಲಸಗಳಿಗೆ ಟೆಂಡರ್ ಕೊಡಲು ಇಚ್ಛಿಸಿದಲ್ಲಿ ಇಎಂಡಿ ಮತ್ತು ಭದ್ರತಾ ಠೇವಣಿಯನ್ನು ಕಡ್ಡಾಯವಾಗಿ ನೀಡಬೇಕಾಗುವುದು.
23. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರ್‌ನ್ನು ಹಿಂತೆಗೆದುಕೊಂಡಲ್ಲಿ, ನಿಗದಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ, ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಅಂತಹ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು. ಇಂತಹ ಮರು ಟೆಂಡರ್‌ನಲ್ಲಿ ಸರ್ಕಾರಕ್ಕೆ ಹಾನಿಯಾದ ಪಕ್ಷದಲ್ಲಿ ಅಂತಹ ಹಾನಿಯ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963ರ ಕಾಲಂ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.
24. ಕೆಲಸ ಪೂರ್ಣಗೊಂಡ ದಿನಾಂಕದಿಂದ 1 ವರ್ಷದ ಒಳಗಾಗಿ ಕಾಮಗಾರಿಯಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುವುದು. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು ಅಥವಾ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.
25. ಗುತ್ತಿಗೆದಾರರು ನೇಮಿಸಿಕೊಂಡ ಕೂಲಿ ಕಾರ್ಮಿಕರಿಗೆ ಅಪಘಾತ ಸಂಭವಿಸಿ ನಷ್ಟ ಉಂಟಾದಲ್ಲಿ ನಷ್ಟ ಪರಿಹಾರವನ್ನು ಗುತ್ತಿಗೆದಾರರೇ ನೀಡಬೇಕಾಗುತ್ತದೆ.

ಪಿ.ಆರ್. 555 ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು.

**ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್‌ರವರ ಕಛೇರಿ, ರಾಜ್ಯ ಗುಪ್ತವಾರ್ತೆ, ನಂ. 2, ನೃಪತುಂಗ ರಸ್ತೆ, ಬೆಂಗಳೂರು-1**

**ಅಲ್ಪಾವಧಿ ಮರು ಟೆಂಡರ್ ಪ್ರಕಟಣೆ**

**ಸಂಖ್ಯೆ: ಸಂಗ್ರಹ/ಮಾಡರ್/2ಎ/2004-05, ದಿನಾಂಕ: 30ನೇ ನವೆಂಬರ್ 2004**

ಪೊಲೀಸ್ ಇಲಾಖೆಗೆ (ರಾಜ್ಯ ಗುಪ್ತವಾರ್ತೆ, ಬೆಂಗಳೂರು) ಅಗತ್ಯವಿರುವ ಈ ಕೆಳಕಂಡ ಉಪಕರಣ ಹಾಗೂ ಅದರ ಭಾಗಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು (ಟೆಂಡರ್) ಆಹ್ವಾನಿಸಲಾಗಿದೆ.

| ಕ್ರಮ ಸಂ. | ಉಪಕರಣದ ಹೆಸರು | ಸಂಖ್ಯೆ |
|---|---|---|
| 1 | ವೆಹಿಕಲ್ ಮೌಂಟೆಡ್ ಸೆಲ್ ಫೋನ್ ಜಾಮರ್ (ಸಿಡಿಎಂಎ, ಜಿಎಸ್‌ಎಂ ಮತ್ತು ಎಕ್ಸ್‌ಟೆಂಡೆಡ್ ಜಿಎಸ್‌ಎಂ ಸೆಲ್ ಫೋನ್‌ಗಳಿಗೆ) | 1 |
| 2 | ಪೋರ್ಟಬಲ್ ಸೆಲ್ ಫೋನ್ ಜಾಮರ್ (ಸಿಡಿಎಂಎ, ಜಿಎಸ್‌ಎಂ ಮತ್ತು ಎಕ್ಸ್‌ಟೆಂಡೆಡ್ ಜಿಎಸ್‌ಎಂ ಸೆಲ್ ಫೋನ್‌ಗಳಿಗೆ) | 1 |

**ಸೂಚನೆ:** ಮೇಲಿನ ಉಪಕರಣದ ಉತ್ಪಾದಕರು / ಉತ್ಪಾದಕ ಘಟಕ / ಉತ್ಪಾದಕ ಘಟಕದ ಅಧಿಕೃತ ಏಜೆಂಟರುದಾರರು, ಪ್ರಖ್ಯಾತ ಕಂಪೆನಿಯ ಬ್ರಾಂಡ್‌ಗಳಿಗೆ ಆದ್ಯತೆ ನೀಡಲಾಗುವುದು.

1. ವಿವರ ಹಾಗೂ ಷರತ್ತನ್ನು ಒಳಗೊಂಡ ಟೆಂಡರ್ ಅರ್ಜಿಯನ್ನು ವಿಶಿಷ್ಟತೆಯೊಂದಿಗೆ (Specifications) ದಿನಾಂಕ: 8.12.2004 ರಿಂದ 27.12.2004 ರವರೆಗೆ ಕಚೇರಿಯ ಕೆಲಸದ ದಿನದಂದು ಬೆಳಿಗ್ಗೆ 10 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಚೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿಯ ಬೆಲೆ ರೂ. 200/- ಆಗಿದ್ದು, ಇದನ್ನು ಮರು ಪಾವತಿ ಮಾಡಲಾಗುವುದಿಲ್ಲ. ಟೆಂಡರ್ ಅರ್ಜಿಯನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್ ಮೂಲಕ ಪಾವತಿಸಿದರೆ ಅಂಗೀಕರಿಸುವುದಿಲ್ಲ) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಬಯಸುವವರು ರೂ. 200/- ಗಳಿಗೆ ಡಿ.ಡಿ. ಯನ್ನು **ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ರಾಜ್ಯ ಗುಪ್ತವಾರ್ತೆ, ನಂ. 2, ನೃಪತುಂಗ ರಸ್ತೆ, ಬೆಂಗಳೂರು-01,** ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಹಾಗೂ ಸ್ವವಿಳಾಸದೊಂದಿಗೆ ಲಕೋಟೆಯ ಮೇಲೆ ರೂ. 30.00 ಗಳ ಅಂಚೆ ಚೀಟಿಯನ್ನು ಅಂಟಿಸಿ ಕಳುಹಿಸಲು ಕೋರಿದೆ. ಹೆಚ್ಚಿನ ಮಾಹಿತಿಗೆ ದೂರವಾಣಿ ಸಂಖ್ಯೆ 080-22241261 ನ್ನು ಸಂಪರ್ಕಿಸಲು ಕೋರಿದೆ. e-mail - rupak@bgl.vsnl.net.in

2. ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ ಕವರುಗಳಲ್ಲಿ ಈ ಕೆಳಕಂಡಂತೆ ಕಳುಹಿಸಬೇಕಾಗಿರುತ್ತದೆ.

ಮೊಹರು ಮಾಡಿದ ಕವರಿನ ಮೇಲ್ಭಾಗದಲ್ಲಿ **"ಉಪಕರಣಗಳ ಸರಬರಾಜಿಗಾಗಿ ಇ.ಎಂ.ಡಿ. ಮತ್ತು ಉಪಕರಣಗಳ ಸರಬರಾಜು ಬೆಲೆ ಪಟ್ಟಿ ಹಾಗೂ ಇತರೆ ವಿವರಣೆ"** ಎಂದು ಹಾಗೂ ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

3. ಮೊಹರು ಮಾಡಿದ ಕವರ್ ಈ ಕೆಳಕಂಡ ಮಾಹಿತಿಯನ್ನು ಒಳಗೊಂಡಿರಬೇಕು.

ಅ) ಸರಬರಾಜು ಮಾಡಲು ಇಚ್ಛಿಸುವ ಪ್ರತಿಯೊಂದು ಸಾಮಗ್ರಿಗಳಿಗೆ ಮುಂಗಡ ಹಣ ಠೇವಣಿ, (ಇ.ಎಂ.ಡಿ)ಯ ಬಾಬ್ತು ಪ್ರತ್ಯೇಕವಾಗಿ **ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ರಾಜ್ಯ ಗುಪ್ತವಾರ್ತೆ, ನಂ. 2, ನೃಪತುಂಗ ರಸ್ತೆ, ಬೆಂಗಳೂರು-1** ರವರ ಹೆಸರಿನಲ್ಲಿ ಡಿಮ್ಯಾಂಡ್ ಡ್ರಾಫ್ಟ್ ಗಳನ್ನು ಪಡೆಯಬೇಕು. ಇ.ಎಂ.ಡಿ. ಯಲ್ಲಿ ನಮೂದಿಸಲಾದ ಸಾಮಾಗ್ರಿಗಳು ಒಟ್ಟು ಬೆಲೆಗೆ ಶೇಕಡ 2 ರಷ್ಟು ಇರಬೇಕು. ಸರಬರಾಜು ಮಾಡುವ ಪ್ರತಿಯೊಂದು ಸಾಮಾಗ್ರಿಗಳಿಗೆ ಪ್ರತ್ಯೇಕ ಇ.ಎಂ.ಡಿ. ಗಳನ್ನು ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಪರಿಗಣಿಸಲಾಗುವುದಿಲ್ಲ.

ಆ) ಸರಬರಾಜು ಮಾಡುವ ಸಂಸ್ಥೆಯ ಸಾಮರ್ಥ್ಯದ ಬಗ್ಗೆ ಮಾಹಿತಿ ಮತ್ತು ಸರಬರಾಜು ಮಾಡುವ ಸಾಮಗ್ರಿಗಳನ್ನು ಉತ್ಪಾದಿಸಲಾಗುತ್ತಿದೆಯೇ ಅಥವಾ ಇಲ್ಲವೆ ಎಂಬ ಬಗ್ಗೆ ದಾಖಲಾತಿ.

ಇ) ಆರ್ಥಿಕ ಸ್ಥಿತಿ ಮತ್ತು ಸಾಮರ್ಥ್ಯದ ಬಗ್ಗೆ.

ಈ) ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ಬಗ್ಗೆ.

ಉ) ವಾರ್ಷಿಕ ವಹಿವಾಟು.

ಊ) ಟೆಂಡರ್ ಅರ್ಜಿದಾರರು ಸರಬರಾಜು ಮಾಡಲು ಬಯಸುವ ಉಪಕರಣಗಳ ಸರಬರಾಜು ಬೆಲೆ

ಋ) ಅನುಭವ ಮತ್ತು ಹಿಂದೆ ಸರಬರಾಜು ಮಾಡಿರುವ ಬಗ್ಗೆ.

4. ಮೊಹರು ಮಾಡಿದ ಕವರ್‌ಗಳನ್ನು ಮೇಲೆ ತಿಳಿಸಿದ ರೀತಿಯಲ್ಲಿ ಶ್ರೀ ಆರ್.ಹೆಚ್. ಔರಾದ್‌ಕರ್, ಐ.ಪಿ.ಎಸ್., ಡೆಪ್ಯೂಟಿ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ರಾಜ್ಯ ಗುಪ್ತವಾರ್ತೆ, ನಂ. 2, ನೃಪತುಂಗ ರಸ್ತೆ, ಬೆಂಗಳೂರು-1, ರವರ ಹೆಸರಿಗೆ ದಿನಾಂಕ: 27.12.2004 ಸಂಜೆ 5.00 ಗಂಟೆಯೊಳಗೆ ತಲುಪುವಂತೆ ಸಲ್ಲಿಸತಕ್ಕದ್ದು. ತದನಂತರ ಸಲ್ಲಿಸಲಾದ/ಪಡೆದ ಅರ್ಜಿಗಳನ್ನು ಪರಿಗಣಿಸುವುದಿಲ್ಲ.

5. ಟೆಂಡರ್ ಆಹ್ವಾನಿಸಿದ ಅಧಿಕಾರಿಯು ದಿನಾಂಕ: 28.12.2004 ರಂದು ಬೆಳಿಗ್ಗೆ 11.30 ಗಂಟೆಗೆ ಕವರನ್ನು ತೆರೆದು ಸರಬರಾಜು ಸಂಸ್ಥೆಗಳು ಸಲ್ಲಿಸಲಾದ ಮಾಹಿತಿಗಳನ್ನು / ದಾಖಲಾತಿಗಳನ್ನು ಪರಿಶೀಲಿಸಿ ಸರಬರಾಜು ಮಾಡುವ ಅರ್ಹ ಸಂಸ್ಥೆಗಳ ಪಟ್ಟಿಯನ್ನು ತಯಾರಿಸಲಾಗುವುದು. ಇಚ್ಛಿಯುಳ್ಳ ಟೆಂಡರ್‌ದಾರರು / ಪ್ರತಿನಿಧಿಗಳು ಟೆಂಡರ್ ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.

6. ಪ್ರತಿ ಸಾಮಗ್ರಿಗಳಿಗೆ ಪ್ರತ್ಯೇಕವಾದ ಇ.ಎಂ.ಡಿ. ಯನ್ನು ಡಿ.ಡಿ. ಮೂಲಕ ಪಾವತಿಸದಿದ್ದರೆ, ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಅಂಚೆ ಮೂಲಕ/ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿಗಳು ಮತ್ತು ದಾಖಲಾತಿಗಳು ವಿಳಂಬವಾಗಿ ತಲುಪಿದ್ದಲ್ಲಿ/ ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೇ ಸಾರಾಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್‌ರವರ ಪರವಾಗಿ,

ಪಿ.ಆರ್. 556 ರಾಜ್ಯ ಗುಪ್ತವಾರ್ತೆ.

## ಕರ್ನಾಟಕ ರಾಜ್ಯ ವೃತ್ತಿ ಶಿಕ್ಷಣ ನಿರ್ದೇಶನಾಲಯ
**8ನೇ ಮಹಡಿ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು-560 001**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಡಿವಿಇ:ಪವಿ:ಲೇ.ಸಾ.ಮು:13:2004-05, ದಿನಾಂಕ: 19ನೇ ನವೆಂಬರ್ 2004**

2004-05ನೇ ಸಾಲಿನ ವೃತ್ತಿ ಶಿಕ್ಷಣ ನಿರ್ದೇಶನಾಲಯದ ವಾರ್ಷಿಕ ಪರೀಕ್ಷೆ ನಡೆಸಲು ಬೇಕಾಗಿರುವ ಲೇಖನ ಸಾಮಗ್ರಿಗಳಾದ 12 ಪುಟಗಳ ಮುಖ್ಯ ಉತ್ತರ ಪತ್ರಿಕೆಗಳು ಮತ್ತು 4 ಪುಟಗಳ ಹೆಚ್ಚುವರಿ ಹಾಳೆಗಳು ಹಾಗೂ ವೃತ್ತಿ ಶಿಕ್ಷಣ ಇಲಾಖೆಯ ವಿವಿಧ ವಿಷಯಗಳ ಉಪನ್ಯಾಸಕರ ಕೈಪಿಡಿಗಳನ್ನು ಮುದ್ರಿಸಿ ಬೈಂಡ್ ಮಾಡಿ ಸರಬರಾಜು ಮಾಡುವ ಬಗ್ಗೆ ಆಸಕ್ತಿ ಇರುವ ಟೆಂಡರ್‌ದಾರರು ರೂ. 100.00 ಗಳನ್ನು ಚಲನ್ ಮೂಲಕ ಲೆಕ್ಕಶೀರ್ಷಿಕೆ: 0202-01-102-1-09 ಕ್ಕೆ ಪಾವತಿ ಮಾಡಿ, ವಿವರಗಳನ್ನು ಕಚೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ದಿನಾಂಕ: 23.12.2004 ರ ಸಂಜೆ 4.00 ಗಂಟೆಯೊಳಗೆ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದು.

ನಿರ್ದೇಶಕರು,

ಕರ್ನಾಟಕ ರಾಜ್ಯ ವೃತ್ತಿ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು.

## ಕರ್ನಾಟಕ ರಾಜ್ಯ ವೃತ್ತಿ ಶಿಕ್ಷಣ ನಿರ್ದೇಶನಾಲಯ
**8ನೇ ಮಹಡಿ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು-560 001**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಡಿವಿಇ:ಪವಿ:ಲೆ.ಸಾ.ಮು:13:2004-05, ದಿನಾಂಕ: 19ನೇ ನವೆಂಬರ್ 2004**

ಹನ್ನೆರಡು ಪುಟದ ಅಂದಾಜು 03 ಲಕ್ಷ ಉತ್ತರ ಪತ್ರಿಕೆ ಪುಸ್ತಕಗಳನ್ನು ಮತ್ತು ನಾಲ್ಕು ಪುಟದ ಅಂದಾಜು 02 ಲಕ್ಷ ಹೆಚ್ಚುವರಿ ಹಾಳೆಗಳನ್ನು ಮುದ್ರಿಸಿ, ಹೊಲಿಗೆ ಹಾಕಿ ಜೋಡಿಸಿ, ಸ್ಟಾಪ್ಲಿಂಗ್ ಮಾಡಿ ಹಾಗೂ ವೃತ್ತಿ ಶಿಕ್ಷಣ ಇಲಾಖೆಯ ವಿವಿಧ ವಿಷಯಗಳ ಉಪನ್ಯಾಸಕರ ಕೈಪಿಡಿಗಳನ್ನು ಮುದ್ರಿಸಿ ಬೈಂಡ್ ಮಾಡಿ ಸರಬರಾಜು ಮಾಡಲು ವೆಬ್‌ಕಿಂಗ್ ಪ್ರಿಂಟಿಂಗ್ ಪ್ರೆಸ್‌ವುಳ್ಳ, ದೊಡ್ಡ ಪ್ರಮಾಣದಲ್ಲಿ ಮುದ್ರಣ ಅನುಭವ ಇರುವ ಪ್ರಿಂಟರ್‌ಗಳಿಂದ ಮೊಹರಾದ ಟೆಂಡರ್‌ನ್ನು ಆಹ್ವಾನಿಸಲಾಗಿರುತ್ತದೆ.

ಮೊಹರಾದ ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 23.12.2004 ರ ಸಮಯ ಮಧ್ಯಾಹ್ನ 4.00 ಗಂಟೆಯಾಗಿರುತ್ತದೆ. ಮುದ್ರಣ ಕಾರ್ಯದ ಟೆಂಡರ್ ಫಾರಂ, ಪೂರ್ಣ ಕಾರ್ಯದ ವಿವರ, ನಿಯಮ, ನಿಬಂಧನೆ ಮತ್ತು ಮಾದರಿಗಳನ್ನು ರೂ. 100.00 ಚಲನ್ ಮೂಲಕ ಪಾವತಿಸಿ ಕಚೇರಿ ವೇಳೆಯಲ್ಲಿ ಈ ನಿರ್ದೇಶನಾಲಯದಲ್ಲಿ ಪಡೆದುಕೊಳ್ಳಬಹುದು. ಸೀಲ್ ಮಾಡಿದ ಟೆಂಡರ್ ಜೊತೆ ಇಎಂಡಿ ಹಣವನ್ನು ಈ ಕೆಳಗಿನಂತೆ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿರ್ದೇಶಕರು, ವೃತ್ತಿ ಶಿಕ್ಷಣ ನಿರ್ದೇಶನಾಲಯ, 8ನೇ ಮಹಡಿ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು-1 ಇವರ ಹೆಸರಿಗೆ ಪಡೆದು ಶ್ರೀ ಹೆಚ್.ಕೆ. ನಾರಾಯಣಮೂರ್ತಿ, ಸಹನಿರ್ದೇಶಕರು (ಪರೀಕ್ಷೆ) ಇವರಿಗೆ ಸಲ್ಲಿಸತಕ್ಕದ್ದು. ತಡವಾಗಿ ಮತ್ತು ಅಪೂರ್ಣವಾಗಿ ಬಂದಂತಹ ಟೆಂಡರ್‌ಗಳನ್ನು ಕಾರಣ ನೀಡದೆ ತಿರಸ್ಕರಿಸಲಾಗುವುದು. ಟೆಂಡರ್‌ನ್ನು ಒಪ್ಪುವ ಅಥವಾ ತಿರಸ್ಕರಿಸುವ ಮತ್ತು ಮುದ್ರಣ ಕಾರ್ಯ ಕಡಿಮೆ ಮಾಡುವ : ಜಾಸ್ತಿ ಮಾಡುವ ಹಕ್ಕು ನಿರ್ದೇಶಕರಿಗಿರುತ್ತದೆ. ಸ್ವೀಕೃತವಾದ ಟೆಂಡರ್‌ಗಳನ್ನು ದಿನಾಂಕ; 23.12.2004 ರಂದು ಸಂಜೆ 4.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ನಿರ್ದೇಶಕರ ಕೊಠಡಿಯಲ್ಲಿ ತೆರೆಯಲಾಗುವುದು.

**ಇ.ಎಂ.ಡಿ. ಮೊತ್ತ ಸಲ್ಲಿಸಬೇಕಾದ ವಿವರ:**

| ಕ್ರಮ ಸಂಖ್ಯೆ | ವಿವರ | ರೂ.ಗಳಲ್ಲಿ |
|---|---|---|
| 1 | ಉತ್ತರ ಪತ್ರಿಕೆಗಳು ಮತ್ತು ಹೆಚ್ಚುವರಿ ಹಾಳೆಗಳ ಮುದ್ರಣ | 10000.00 |
| 2 | ಉಪನ್ಯಾಸಕರ ಕೈಪಿಡಿಗಳ ಮುದ್ರಣ | 5000.00 |
| 3 | ಉತ್ತರ ಪತ್ರಿಕೆ, ಹೆಚ್ಚುವರಿ ಹಾಳೆಗಳು ಮತ್ತು ಕೈಪಿಡಿಗಳ ಮುದ್ರಣ | 15000.00 |

ನಿರ್ದೇಶಕರು,

ಪಿ.ಆರ್. 557 ಕರ್ನಾಟಕ ರಾಜ್ಯ ವೃತ್ತಿ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು.

## ಲೋಕಸೇವಾ ಆಯೋಗದ ಕಚೇರಿ, "ಪಾರ್ಕ್ ಹೌಸ್", ಬೆಂಗಳೂರು
**ತಿದ್ದುಪಡಿ**

**ಸಂಖ್ಯೆ: ಇ.ಪ.(1) 3358/2004-05/ಪಿಎಸ್‌ಸಿ, ದಿನಾಂಕ: 30ನೇ ನವೆಂಬರ್ 2004**

ಆಯೋಗದ ಅಧಿಸೂಚನೆ ಸಂಖ್ಯೆ: ಇ.ಪ(1) 3064/2004-05, ದಿನಾಂಕ: 21.9.2004 ರಲ್ಲಿ ಪ್ರಕಟಿಸಲಾಗಿರುವ 2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ ಮಡಿಕೇರಿ ಕೇಂದ್ರಕ್ಕೆ ಸಂಬಂಧಿಸಿದಂತೆ Appendix-A ರ ಅಡಿಯಲ್ಲಿ 'ಜನರಲ್ ಲಾ ಭಾಗ-1' ಶೀರ್ಷಿಕೆಯ ಕೆಳಗೆ ಸಾಮಾನ್ಯ ದರ್ಜೆ ಅಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 72002 ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಪಿ.ಆರ್. 558 ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು-1

**ಲೋಕೋಪಯೋಗಿ ಇಲಾಖೆ**

**ಕಾರ್ಯಪಾಲಕ ಅಭಿಯಂತರವರ ಕಚೇರಿ, ಲೋ.ಇ. ವಿಭಾಗ, ದಾವಣಗೆರೆ**

**ಟೆಂಡರ್ ಪ್ರಕಟಣೆ**

**(ದ್ವಿ ಲಕೋಟೆ ಪದ್ಧತಿ)**

**ಸಂಖ್ಯೆ: ಇಇ/ಪಿಡಬ್ಲ್ಯೂಡಿ/ಡಿವಿಜಿ/ಸ.ಇಂ.1/ಬಿಲ್ಡಿಂಗ್ಸ್/1657/2004-05, ದಿನಾಂಕ: 24ನೇ ನವೆಂಬರ್ 2004**

ಈ ಕೆಳಗೆ ನಮೂದಿಸಿದ ಕಾಮಗಾರಿಗಾಗಿ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ, ಕರ್ನಾಟಕ ರಾಜ್ಯದ ರಾಜ್ಯಪಾಲರ ಪರವಾಗಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರಿಂದ ಕಾಮಗಾರಿಯ ಹೆಸರನ್ನು ನಮೂದಿಸಿದ ದ್ವಿ ಲಕೋಟೆ ಪದ್ಧತಿಯಲ್ಲಿ, ನಿಗದಿತ ನಮೂನೆಯಲ್ಲಿ ಮೊಹರಾದ ಐಟಂವಾರು ಟೆಂಡರ್‌ನ್ನು ಕರೆಯಲಾಗಿದೆ. ಕಾಮಗಾರಿಯ ಮುಂದೆ ನಮೂದಿಸಿರುವ ಕಾಲಂ 10 ರಲ್ಲಿ ತಿಳಿಸಿರುವ ದಿನಾಂಕದಂದು ಸಂಜೆ 4.00 ಗಂಟೆಯವರೆಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ಹಾಗೂ ಆ್ಯಕ್ಟ್-2000 ದ ಪ್ರಕಾರ ಮತ್ತು ಪಿ.ಡಬ್ಲ್ಯು.ಜಿ. 65 ಕೆ.ಪಿ.ಡಬ್ಲ್ಯು.ಡಿ. ಕೋಡ್ ವಾಲ್ಯೂಂ-2 ರಲ್ಲಿನ ಷರತ್ತುಗಳಿಗೊಳಪಡಿಸಿ, ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳು ಈ ಕಚೇರಿಯಲ್ಲಿ ಸ್ವೀಕರಿಸುತ್ತಾರೆ. ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳು, ಟೆಂಡರ್ ಲಕೋಟೆ - 1 ನ್ನು ಅದೇ ದಿನ ಸಂಜೆ 4.30 ಕ್ಕೆ ತೆರೆಯಲಾಗುವುದು ಇಲ್ಲವಾದಲ್ಲಿ ಮರುದಿನದ ಕಚೇರಿ ಕೆಲಸದ ವೇಳೆಯಲ್ಲಿ ತೆರೆಯಲಾಗುವುದು.

ಕಾಲಂ-5 ರಲ್ಲಿ ನಮೂದಿಸಿರುವ ಮೊತ್ತವನ್ನು ಭರಿಸಿ (ಹಿಂದಿರುಗಿಸಲಾಗದ) ಟೆಂಡರ್‌ಗಾಗಿ ಅರ್ಜಿಯನ್ನು ಸಲ್ಲಿಸಿ, ಟೆಂಡರ್ ಡಾಕ್ಯುಮೆಂಟ್‌ಗಳನ್ನು ಈ ಕಚೇರಿಯಿಂದ ಪಡೆಯಬಹುದಾಗಿದೆ. ಕಾಲಂ-9 ರಲ್ಲಿ ನಮೂದಿಸಿರುವ ದಿನಾಂಕದಂದು ಬೆಳಿಗ್ಗೆ 10.00 ರಿಂದ ಸಂಜೆ 5.30 (ಮಧ್ಯಾಹ್ನ 1.30 ರಿಂದ 2.15 ರವರೆಗೆ ಹೊರತುಪಡಿಸಿ) ಗಂಟೆಯವರೆಗೆ ಟೆಂಡರ್ ಡಾಕ್ಯುಮೆಂಟ್‌ಗಳನ್ನು ಷರತ್ತುಗಳಿಗೊಳಪಟ್ಟು ಸಂಬಂಧಿಸಿದ ಗುತ್ತಿಗೆದಾರರಿಗೆ ನೀಡಲಾಗುವುದು.

ಕಾಮಗಾರಿಯ ಅಂದಾಜು, ಪ್ಲಾನ್ ಮತ್ತು ಗುತ್ತಿಗೆ ಷರತ್ತು ಹಾಗೂ ಇತರೆ ವಿವರಗಳನ್ನು ಈ ಕಚೇರಿಯ ಕೆಲಸದ ವೇಳೆಯಲ್ಲಿ ನೋಡಬಹುದಾಗಿದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್ ಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು (ಇ.ಎಂ.ಡಿ) ಮೊತ್ತ (ಲಕ್ಷ ರೂ.ಗಳಲ್ಲಿ) | ಖಾಲಿ ಟೆಂಡರ್ ಪುಸ್ತಕ ಬೆಲೆ (ಹಿಂದಿರುಗಿ ಸಲಾಗದ) (ರೂ.ಗಳಲ್ಲಿ) | ಅರ್ಹ ಗುತ್ತಿಗೆ ದಾರರ ದರ್ಜೆ | ಕಾಮಗಾರಿ ಪೂರ್ಣ ಗೊಳಿಸಲು ಕಾಲಾವಧಿ | ನಿಗದಿತ ದಿನಾಂಕ | | | ಷರಾ |
|---|---|---|---|---|---|---|---|---|---|---|
| | | | | | | | ಟೆಂಡರ್ ಗಾಗಿ ಅರ್ಜಿ ಸಲ್ಲಿಸಲು (ಸಂಜೆ 5.30 ಗಂಟೆವರೆಗೆ) | ಖಾಲಿ ಟೆಂಡರ್ ಫಾರಂ ವಿತರಿಸಲು (ಸಂಜೆ 5.30 ಗಂಟೆವರೆಗೆ) | ಭರ್ತಿ ಮಾಡಿದ ಮೊಹರಾದ ಟೆಂಡರ್ ಗಳನ್ನು ಸ್ವೀಕರಿ ಸುವುದು (ಸಂಜೆ 4.00 ಗಂಟೆವರೆಗೆ) | |
| 1 | ದಾವಣಗೆರೆ ನಗರದಲ್ಲಿ ವಾಣಿಜ್ಯ ತೆರಿಗೆ ಕಚೇರಿಗಳ ಕಟ್ಟಡ ನಿರ್ಮಾಣ | 200.00 lakhs | 2.00 lakhs | 15,000 + KST | Class I | 18 ತಿಂಗಳು ಮಳೆಗಾಲದ ಅವಧಿ ಸೇರಿ | 29.12.04 | 7.1.05 | 10.1.05 | ಐಟಂ ವಾರು |

**ಷರತ್ತುಗಳು:**

1. ಗುತ್ತಿಗೆದಾರರು ಟೆಂಡರ್‌ನ್ನು ಸಲ್ಲಿಸುವಾಗ "ಲಕೋಟೆ-1 - ಟೆಕ್ನಿಕಲ್ ಬಿಡ್" ಎಂದು ನಮೂದಿಸಿರುವ ಲಕೋಟೆಯಲ್ಲಿ ಈ ಕೆಳಕಾಣಿಸಿರುವ ದಾಖಲಾತಿಗಳನ್ನು ತಪ್ಪದೇ ಸಲ್ಲಿಸಬೇಕಾಗಿರುತ್ತದೆ.

ಅ) ಗುತ್ತಿಗೆದಾರರು ಈ ಹಿಂದೆ ಇದೇ ತರಹದ ಕಾಮಗಾರಿಯನ್ನು ನಿರ್ವಹಿಸಿರುವ ಅನುಭವವುಳ್ಳವರಾಗಿರಬೇಕು. ಗುತ್ತಿಗೆದಾರರ ಅರ್ಹತೆಯು ಈ ಕೆಳಕಾಣಿಸಿರುವ ಅಂಶಗಳ ಮೇಲೆ ಅವಲಂಬಿತವಾಗಿರುತ್ತದೆ.

(1) ಗುತ್ತಿಗೆದಾರರು ಹಿಂದಿನ ಐದು ಆರ್ಥಿಕ ವರ್ಷಗಳಲ್ಲಿ ಅಂದರೆ 2000-01 ರಿಂದ 2004-05ರ ಅವಧಿಯಲ್ಲಿ ರೂ. 60.00 ಲಕ್ಷಗಳಿಗೆ ಕಡಿಮೆ ಇಲ್ಲದಂತೆ ಒಂದು ಕಟ್ಟಡ ಕಾಮಗಾರಿಯನ್ನು ಹನ್ನೆರಡು ತಿಂಗಳುಗಳಲ್ಲಿ ಪೂರ್ಣಗೊಳಿಸಿರುವುದು ಕಡ್ಡಾಯವಾಗಿರುತ್ತದೆ ಮತ್ತು ಈ ಬಗ್ಗೆ ಸಕ್ಷಮ ಅಧಿಕಾರಿಗಳಿಂದ (ಕಾರ್ಯಪಾಲಕ ಅಭಿಯಂತರವರ ಶ್ರೇಣಿಗೆ ಕಡಿಮೆಯಿಲ್ಲದ ಅಧಿಕಾರಿಗಳಿಂದ) ಮೂಲ ಪ್ರಮಾಣ ಪತ್ರವನ್ನು ಲಗತ್ತಿಸುವುದು ಕಡ್ಡಾಯವಾಗಿರುತ್ತದೆ.

(2) ಗುತ್ತಿಗೆದಾರರು ಹಿಂದಿನ ಐದು ಆರ್ಥಿಕ ವರ್ಷಗಳ ಅಂದರೆ 2000-01 ರಿಂದ 2004-05 ರವರೆಗಿನ ಅವಧಿಯಲ್ಲಿ ಯಾವುದೇ ಎರಡು ವರ್ಷಗಳಲ್ಲಿ ಪ್ರತಿ ವರ್ಷ ಕಟ್ಟಡ ಕಾಮಗಾರಿಗಳಲ್ಲಿ ರೂ. 60.00 ಲಕ್ಷಗಳ ಕನಿಷ್ಠ ವಹಿವಾಟು ಹೊಂದಿದ ಬಗ್ಗೆ ಪ್ರಮಾಣ ಪತ್ರವನ್ನು ಚಾರ್ಟರ್ಡ್ ಅಕೌಂಟೆಂಟ್‌ರಿಂದ ಪಡೆದು ಲಗತ್ತಿಸತಕ್ಕದ್ದು.

ಆ) ಕಟ್ಟಡ ಕಾಮಗಾರಿಗೆ ಸಂಬಂಧಪಟ್ಟಂತೆ ತಯಾರಿಕಾ ಸಲಕರಣೆ, ಯಂತ್ರೋಪಕರಣಗಳು ಮತ್ತು ಸ್ಟೀಲ್ ಸೆಂಟ್ರಿಂಗ್ ಮತ್ತು ಫಾರಂ ವರ್ಕ್ ಸಾಮಗ್ರಿಗಳನ್ನು ಸ್ವತಃ ಹೊಂದಿರುವ ಸಾಮರ್ಥ್ಯ.

ಇ) ಟೆಂಡರ್‌ನಲ್ಲಿ ಭಾಗವಹಿಸುವ ಗುತ್ತಿಗೆದಾರರ ಆರ್ಥಿಕ ಸ್ಥಾನಮಾನ ಮತ್ತು ಸಾಮರ್ಥ್ಯ;

(1) ರೂ. 200.00 ಲಕ್ಷಗಳಿಗೆ ಷೆಡ್ಯೂಲ್ಡ್ ಬ್ಯಾಂಕ್ / ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಸಾಲ ತೀರಿಕೆ ಪ್ರಮಾಣ ಪತ್ರ ಪಡೆದು ಸಲ್ಲಿಸತಕ್ಕದ್ದು.

(2) ಗುತ್ತಿಗೆ ಅವಧಿಯಲ್ಲಿ ರೂ. 50.00 ಲಕ್ಷಗಳ ಕ್ರೆಡಿಟ್ / ಓವರ್‌ಡ್ರಾಫ್ಟ್ ಸೌಲಭ್ಯವಿರುವ ಬಗ್ಗೆ 'ಫಾರಂ-ಕೆ' ನಲ್ಲಿ ಪ್ರಮಾಣ ಪತ್ರವನ್ನು ಷೆಡ್ಯೂಲ್ಡ್ ಬ್ಯಾಂಕ್ / ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಪಡೆದು ಸಲ್ಲಿಸತಕ್ಕದ್ದು.

ಈ) ಗುತ್ತಿಗೆದಾರರು ತಾವು ನೇಮಿಸಿಕೊಂಡಿರುವ ತಾಂತ್ರಿಕ ಸಿಬ್ಬಂದಿ ಮತ್ತು ಅವರ ಅನುಭವದ ಬಗ್ಗೆ ವಿವರಗಳನ್ನು ಲಗತ್ತಿಸಬೇಕು.

ಉ) ಕಾಮಗಾರಿಗಾಗಿ ಸಲ್ಲಿಸುವ ಇಡುಗಂಟು (ಇ.ಎಂ.ಡಿ) ಮೊತ್ತವು ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್, ಬ್ಯಾಂಕ್ ಗ್ಯಾರಂಟಿ, ಎಫ್.ಡಿ.ಆರ್. ಅಥವಾ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರದ ರೂಪದಲ್ಲಿರಬೇಕು. ಫಿಕ್ಸೆಡ್ ಡಿಪಾಸಿಟ್ ರಿಸಿಟ್ಸ್ (ಎಫ್.ಡಿ.ಆರ್) ಕಾರ್ಯಪಾಲಕ

ಅಭಿಯಂತರರು, ಲೋ.ಇ. ವಿಭಾಗ, ದಾವಣಗೆರೆ ಇವರ ಹೆಸರಿನಲ್ಲಿರಬೇಕು. ಅಥವಾ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳನ್ನು ಕಾರ್ಯಪಾಲಕ ಅಭಿಯಂತರರು, ಲೋ.ಇ. ವಿಭಾಗ, ದಾವಣಗೆರೆ ಇವರಿಗೆ ಅಡಮಾನವಾಗಿಟ್ಟಿರಬೇಕು. ಮತ್ತು ಸದರಿ ಇಡುಗಂಟು (ಇ.ಎಂ.ಡಿ) ಗೆ ಸಂಬಂಧಿಸಿದ ಪ್ರಮಾಣ ಪತ್ರಗಳನ್ನು 'ಲಕೋಟೆ-1 - ಟೆಕ್ನಿಕಲ್ ಬಿಡ್' ಎಂದು ನಮೂದಿಸಿರುವ ಲಕೋಟೆಯಲ್ಲಿ ಲಗತ್ತುಪಡಿಸಿ ತಪ್ಪದೇ ಸಲ್ಲಿಸಬೇಕು. ಇಡುಗಂಟು (ಇ.ಎಂ.ಡಿ) ಲಗತ್ತಿಸದ ಟೆಂಡರ್‌ಗಳು ತಿರಸ್ಕರಿಸಲ್ಪಡುತ್ತವೆ. ಅಲ್ಲದೇ ಕಾರ್ಯಪಾಲಕ ಅಭಿಯಂತರರು, ಲೋ.ಇ. ವಿಭಾಗ, ದಾವಣಗೆರೆ ಇವರ ಹೆಸರಿಗೆ ಅಡಮಾನವಾಗಿಡದ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳು ತಿರಸ್ಕರಿಸಲ್ಪಡುತ್ತವೆ. ಅಲ್ಲದೇ ಇಡುಗಂಟು (ಇ.ಎಂ.ಡಿ.) ವಾಯಿದೆಯು 180 ದಿನಗಳಿಗಿಂತ ಕಡಿಮೆಯಿರಬಾರದು.

2. ಟೆಂಡರ್‌ನಲ್ಲಿ ಭಾಗವಹಿಸಿದ ಗುತ್ತಿಗೆದಾರರು "ಲಕೋಟೆ-2 - ಫೈನಾನ್ಷಿಯಲ್ ಬಿಡ್" ಎಂದು ನಮೂದಿಸಿದ ಎರಡನೇ ಲಕೋಟೆಯಲ್ಲಿ ದರ ನಮೂದಿಸಿರುವ ಷೆಡ್ಯೂಲ್-ಬಿ ಯನ್ನು ದ್ವಿಪ್ರತಿಯಲ್ಲಿ ಸಲ್ಲಿಸಬೇಕಾಗಿರುತ್ತದೆ.
3. ಟೆಂಡರ್‌ಗಳನ್ನು ಯಾವುದೇ ಕಾರಣ ಅಥವಾ ಕಾರಣವಿಲ್ಲದೇ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗೆ ಸೇರಿರುತ್ತದೆ.
4. ನಿಬಂಧನೆಯುಕ್ತ ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು.
5. ಗುತ್ತಿಗೆದಾರರು ಟೆಂಡರ್‌ಗಳಿಗೆ ಅರ್ಜಿಯನ್ನು ಸಲ್ಲಿಸುವಾಗ ಗುತ್ತಿಗೆದಾರರ ನೋಂದಣಿ ಪ್ರಮಾಣ ಪತ್ರ ಹಾಗೂ ಚಾಲ್ತಿ ಸಾಲಿನ ಆದಾಯ ತೆರಿಗೆ ವಿಮೋಚನೆ ಪತ್ರವನ್ನು ಸಲ್ಲಿಸುವುದು ಕಡ್ಡಾಯವಾಗಿರುತ್ತದೆ.
6. ಕಾಮಗಾರಿಗೆ ಸಂಬಂಧಿಸಿದಂತೆ ಯಾವುದೇ ಸಾಮಗ್ರಿಗಳನ್ನು ಇಲಾಖಾ ವತಿಯಿಂದ ಒದಗಿಸಲಾಗುವುದಿಲ್ಲ. ಗುತ್ತಿಗೆದಾರರು ಕಟ್ಟಡ ನಿರ್ಮಾಣಕ್ಕೆ ಬೇಕಾಗುವ ಸ್ಟೀಲ್, ಸಿಮೆಂಟ್ ಹಾಗೂ ಇತರೆ ಸಾಮಗ್ರಿಗಳನ್ನು ತಮ್ಮ ಸ್ವ ಸಹಾಯದಿಂದ ಒದಗಿಸಿಕೊಳ್ಳಬೇಕು ಮತ್ತು ಸದರಿ ಸಾಮಗ್ರಿಗಳ ಗುಣ ನಿಯಂತ್ರಣದ ಬಗ್ಗೆ ಪ್ರಮಾಣ ಪತ್ರವನ್ನು ತಪ್ಪದೇ ಒದಗಿಸಬೇಕು.
7. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ನಲ್ಲಿರುವ ಸೂಚನೆ ಮತ್ತು ಷರತ್ತುಗಳು ಅನ್ವಯಿಸುತ್ತವೆ.
8. 'ಲಕೋಟೆ-1 ಮತ್ತು ಲಕೋಟೆ-2 ನ್ನು ಪ್ರತ್ಯೇಕವಾಗಿ ಸಲ್ಲಿಸುವುದು. ಲಕೋಟೆ-1 ರಲ್ಲಿ ಪೂರ್ವಾರ್ಹತೆ ಪಡೆದ ಗುತ್ತಿಗೆದಾರರ ಲಕೋಟೆ-2 (ಆರ್ಥಿಕ ಬಿಡ್) ನ್ನು ಮುಂದೆ ತಿಳಿಸಲಾಗುವ ದಿನಾಂಕದಂದು ತೆರೆಯಲಾಗುವುದು.

ಕಾರ್ಯಪಾಲಕ ಅಭಿಯಂತರರು,

ಪಿ.ಆರ್. 559 ಲೋಕೋಪಯೋಗಿ ಇಲಾಖೆ ವಿಭಾಗ, ದಾವಣಗೆರೆ.

**OFFICE OF THE EXECUTIVE ENGINEER, PUBLIC WORKS DEPARTMENT, KOLAR DIVn., KOLAR**

**ITEM RATE TENDER EXTENSION NOTIFICATION**

**TENDER NOTIFICATION No. 17-1/2004-05, Dated 27th November 2004**

**Ref:** 1) This office Tender notification No. EE/PWD/KLR DIVN/JE(2)/CRF/ROAD WORKS/2004-05 Dtd. 27.10.2004

The dates of the above Tender notification under reference is extended as cited below.

| | |
|---|---|
| 1. Date of issue of Tender documents | 20.12.2004 Upto 5.00 PM |
| 2. Date of receipt of Tenders | 24.12.2004 Upto 4.00 PM<br>In O/o The Chief Engineer C&B(S), Bangalore, O/o The Superintending Engineer, PWD Bangalore circle Bangalore & O/o The Executive Engineer PWD, Kolar Division, Kolar |
| 3. Date of opening of technical bids | 24.12.2004 at 4.30 PM in under signed office if possible |

There are no changes for remaining conditions. Any further details can be had from the Division Office on all working days during office hours.

PR-560 Executive Engineer, P.W.D. Kolar Division, Kolar.

**OFFICE OF THE EXECUTIVE ENGINEER, PWD, KOLAR DIVISION, KOLAR**

**TENDER NOTIFICATION 1ST Call (In two cover system)**

**No. EE/PWD/KLRDIVN/JE(2)/M.V.S./MULABAGAL/19/2004-05, Dt. 26th November 2004**

Sealed Item Rate tenders for the work noted below under TWO COVER BID SYSTEM as per the Karnataka Transparency in public procurement act-2000 in prescribed forms in duplicate is invited from class-1 contractors registered in K.P.W.D/MORT&H approved firms. Two Cover bid system of tendering consists of Technical Bid and Financial Bid. These two covers shall be sealed and kept in another sealed cover duly super subscribing name of the cover and shall be addressed do the under signed with name and full postal address of the bidder. Completed bids will be received in the office of The Chief Engineer, C&B (S), Bangalore-1, Office of the Superintending Engineer, PWD, Bangalore circle, Bangalore-9 & O/o The Executive Engineer, PWD, Kolar Division, Kolar up to 4.00 PM on 31.12.2004 and Technical Bids will be opened in the office of the under signed in presence of Bidders or Authorised representative on 2.1.2005 at 4.30 PM. The contractors who are qualified in technical bids their financial bids opening date will be intimated. The subject of conditions are as per the conditions laid down in the form PWG.65, 66 of KPWD code Vol. I & II, special conditions contained in the schedules and in Karnataka Transparency in Public Procurement act 2000.

| Sl. No. | Name of Work | Approx. Amount put to tender in Lakhs | E.M.D. to be paid in Rs. |
|---|---|---|---|
| 1 | Construction of Mini Vidhana Soudha Building at Mulabagal Town in Kolar District | 78.20 | 78200.00 |

| | | |
|---|---|---|
| A | Last Date of receipt of application for issue of tender forms 10.00 AM to 5.00 PM | 27.12.2004 |
| B | Date of issue of tender forms Morning 10.00 AM to evening 5.00 PM | 29.12.2004 |
| C | Date of receipt of sealed tender forms Morning 10.00 AM to evening 4.00 PM | 31.12.2004 |
| D | Cost of tender form per set (not refundable & Transferable) to be paid in cash or DD | Rs. 10000 + other taxes |
| E | Class of Registration of Contractors eligible to Tender | Class-I |
| F | Time limit for completion of work including Mansoon | 20 Months |

1. Tender forms in the prescribed form and can be obtained from the under signed office on payment of cost of tender forms by cash or demand draft in favour of The Executive Engineer, PWD, Kolar Division, Kolar. Tender form will not be send by Post.

**The Technical Bids shall contain the following details in sealed cover:** a) Letter of application. b) Summary sheet c) General information (Structure organisation of firm) e) General experience record regarding total turnover f) Experience and past performance g) Details of Contractors similar nature h) Current contract commitments I) Financial capability j) Machinery owned. k) Income tax clearance etc., l) Experience certificate issued by competent authority m) **The E.M.D. in DEMAND DRAFT/Bank Guarantee/ NSC/FDR/ furnished should be drawn / pledged in the Name of Executive Engineer, PWD Division, Kolar and to be enclosed with the Technical Bid.**

**LIST OF ENCLOSURES TO BE SUBMIT ALONG WITH THE TECHNICAL BID:**

1. The E.M.D. in the form of D.D./ F.D.R. / Pay Order / Bank Guarantee drawn from a Nationalized Bank or Scheduled Banks or NSC (Pledged in favour of the under signed) to be enclosed with the Technical Bid. The Bank Guarantee shall be in the form as prescribed in PWG 66 supplied with the tender form other wise tenders will be rejected all types of EMD should be valid for 180 days from the date of opening fixed for the Tender other wise such tenders will be rejected.
2. Each Tenderer should have individually satisfactorily completed works of similar Building work of value not less than 50% of the value of work in this notification (Updated at 10% per annum compoundable) in any one financial year during a block period of previous five years (1999-00, 2000-01, 2001-02, 2002-03, 2003-04) and present financial year. The experience certificate in this regard should invariably have mention the date of commencement and date of completion by the competent authority not below the rank of Executive Engineer, otherwise the technical bid is liable for disqualification.
3. For proof of Financial capacity Line of credit from any Scheduled Bank shall be invariably produced for the particular work in the proforma prescribed in the technical bid for an amount equal to 30% of amount put to tender. Failure to submit the line of credit along with Technical bid lead to disqualification.
4. Each tenderer shall own following machinery and enclose with the Technical Bid evidence of ownership, as detailed under. The technical bids submitted without evidence of owner ship as detailed are liable for disqualification.

| Machinaries | Number | Evidence of ownership to be produced |
|---|---|---|
| a) Steel centering with necessary accessories | 600 Sqmtr | Purchase bill / Purchase invoice |
| b) Power concrete Mixers | 2 Nos (min) | -do- |
| c) Pin Vibrators | 2 Nos (min) | -do- |

5. All documents enclosed in support of Technical Bids shall be attested by the Notary, other wise the bids are liable for disqualification. The original documents should be produced for verification at any stage of tender process as and when sought for. Failure to produce original documents leads to disqualification of technical bids.
6. Only relevant certificates and details shall be furnished with the technical bids. Details of company / Agencies / Firms profile be enclosed.
7. All documents enclosed as above shall be page numbered and index shall also be enclosed.

**The Financial Bids shall contain the following details in sealed cover.**

This contains the tender norms and the prices quoted by the Tenderer on schedule-B in duplicate.

**GENERAL CONDITIONS**

1. The Contractors interested in bidding for the works may submit an application to the under signed along with cost of tender documents (non refundable) to be paid in cash or in the form of DD drawn in favour of the Executive Engineer, PWD Kolar Division, Kolar, payable at Kolar along with the application. The applicant should submit proof of registration, relevant experience certificate issued by the Officer not below the rank of Executive Engineer while submitting the application for Tender Schedules, otherwise the application may not be considered.

6. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
7. ಒಂದು ವೇಳೆ ಯಾವುದೇ ಕಾರಣದಿಂದಾಗಿ ಈ ಪಟ್ಟಿ ಮೂಲಕ ಆಯ್ಕೆಯಾದ ಅಭ್ಯರ್ಥಿಗಳ ಆಯ್ಕೆಯು ರದ್ದಾದ ಪಕ್ಷದಲ್ಲಿ ಅಂತಹವರ ಬದಲಿಗೆ ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ಬೇರೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು
8. ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕದ ಯಾವುದೇ ಭಾಗದಲ್ಲಾದರೂ ಕೆಲಸ ಮಾಡಲು ಸಿದ್ಧರಾಗಿರಬೇಕು.
9. ಈ ಆಯ್ಕೆ ಪಟ್ಟಿಯು ಯಾವುದೇ ಸಂಧರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
10. ಹೆಚ್ಚುವರಿ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ವಿಷಯದಲ್ಲಿ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲಾ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲಾ.
11. ಹೆಚ್ಚುವರಿ ಪಟ್ಟಿಯಲ್ಲಿರುವವರಿಗೆ, ಒಂದು ವೇಳೆ ಮುಖ್ಯ ಪಟ್ಟಿಯಲ್ಲಿರುವವರು ಸರ್ಕಾರಿ ಸೇವೆಗೆ ಹಾಜರಾಗದೇ ಇದ್ದಲ್ಲಿ ಮಾತ್ರ, ಹೆಚ್ಚುವರಿ ಪಟ್ಟಿಯಲ್ಲಿರುವವರನ್ನು ಮೀಸಲಾತಿಗೆ ಅನುಗುಣವಾಗಿ ಅರ್ಹತೆ ಆಧಾರದ ಮೇಲೆ ನೇಮಕಾತಿಗಾಗಿ ಪರಿಶೀಲಿಸಲಾಗುವುದು.
12. ಆಯ್ಕೆಯಾಗಿರುವ ಅಭ್ಯರ್ಥಿಗಳಿಗೆ, ಖಾಲಿ ಇರುವ ಹುದ್ದೆಗಳ ಅನುಸಾರ, ನೇಮಕಾತಿ ಆದೇಶ ನೀಡಲಾಗುವುದು.
13. ಯಾವುದೇ ಕಾರಣಕ್ಕಾಗಿ ಈ ಅಂತಿಮ ಆಯ್ಕೆ ಪಟ್ಟಿಕಯು ಪರಿಷ್ಕರಿಸಲ್ಪಟ್ಟಲ್ಲಿ ಅಥವಾ ಬದಲಾವಣೆಯಾದಲ್ಲಿ ಸದರಿ ಪರಿಷ್ಕರಣೆಗೆ ಅನುಗುಣವಾಗಿ ಅಥವಾ ಬದಲಾವಣೆಗೆ ಅನುಗುಣವಾಗಿ ಯಾವುದೇ ಕಾರಣ ನೀಡದೇ ಈ ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳ ಆಯ್ಕೆಯನ್ನು ಮುಕ್ತಾಯಗೊಳಿಸಲಾಗುವುದು ಅಥವಾ ಪರಷ್ಕರಿಸಲಾಗುವುದು.
14. ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿನ ನೇಮಕಾತಿಗಾಗಿ ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ ಸಲ್ಲಿಸಿದ ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಜಾತಿ ಪ್ರಮಾಣ ಪತ್ರ ಹಾಗೂ ಮೀಸಲಾತಿ ವರ್ಗೀಕರಣ ಕುರಿತು ಸಲ್ಲಿಸಿದ ಆಯಾಯ ಮೀಸಲಾತಿ ಪ್ರಮಾಣ ಪತ್ರದ ಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಅಭ್ಯರ್ಥಿಗಳನ್ನು ಆಯಾಯ Category ಯಲ್ಲಿ ಆಯ್ಕೆ ಮಾಡಲಾಗಿದೆ.

    ಒಂದು ವೇಳೆ ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆ ಬಗ್ಗೆ ದಾಖಲೆಗಳ ಸಹಿತ ಸಕಾರಣಗಳೊಂದಿಗೆ ಅವರ ಆಯ್ಕೆಯ Claim ಅನ್ನು ಸ್ಥಾಪಿಸಿದಲ್ಲಿ (establish ಮಾಡಿದಲ್ಲಿ) ಅಥವಾ ಈ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಗಳ ಆಯ್ಕೆಯನ್ನು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಯಾವುದೇ ಕಾರಣ ನೀಡದೇ ಅಥವಾ ಯಾವುದೇ ನೋಟೀಸ್ ನೀಡದೇ ಶಾಶ್ವತವಾಗಿ ರದ್ದುಗೊಳಿಸಲಾಗುವುದು ಹಾಗೂ ಅಂತಹ ಅಭ್ಯರ್ಥಿಗಳ ಬದಲಿಗೆ ಈ ಹುದ್ದೆಯ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಬೇರೊಬ್ಬ ಅಭ್ಯರ್ಥಿಯನ್ನು ಆಯ್ಕೆ ಮಾಡಲಾಗುವುದು. ಇದಕ್ಕೆ ಅಬ್ಯರ್ಥಿಗಳು ಬದ್ಧರಾಗಿರತಕ್ಕದ್ದು.
15. ಹೆಚ್ಚುವರಿ ಪಟ್ಟಿಯಲ್ಲಿರುವ (1) ಆರ್. ಮಂಜುನಾಥ (2) ಎಸ್. ಪುಟ್ಟಸ್ವಾಮಿ (3) ಕಸಂತ್ ಸಿಂಗ್ ಟಿ. ರಜಪೂತ್ (4) ಸುರೇಶ್ ಹರಿಜನ (5) ಎಸ್. ಭಾರತಿ (6) ರೇಣುಕಾ ಸ್ವಾದಿ (7) ರಾಜಶ್ರೀ ಮಂಜುನಾಥ್ (8) ಲಲಿತಾ ಧನಸಿಂಗ್ ರಾಠೋಡ್ (9) ಸುಭಾಷ್ ಚಂದ್ರ (10) G. ಕುಮಾರಸ್ವಾಮಿ ಮತ್ತು (11 ವೈ. ಅನುರಾಧ) ಇವರುಗಳು ತಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರಗಳನ್ನು ಹಾಜರ್‌ಪಡಿಸುವ ಷರತ್ತಿಗೆ ಒಳಪಡಿಸಿ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆ ಮಾಡಿದೆ.
16. ಉಲ್ಲೇಖ (1) ರನ್ವಯ ಪ್ರಕಟಿಸಿರುವ KCS (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್) (ವಿಶೇಷ ನೇಮಕಾತಿ) ನಿಯಮಗಳು 2001 ರಲ್ಲಿನ ನಿಯಮ 6 ರ ಪ್ರಕಾರ ಪ್ರಕಟಿಸಿರುವ ಈ ಅಂತಿಮ ಆಯ್ಕೆ ಪಟ್ಟಿಯಲ್ಲಿ ಅಭ್ಯರ್ಥಿಗಳ ಹೆಸರನ್ನು ಸೇರಿಸಲಾಗಿದೆ ಎಂಬ ಕಾರಣಕ್ಕಾಗಿಯೇ ಈ ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಗಳು ಸದರಿ ನಿಯಮಗಳ ನಿಯಮ 7(2) ರಲ್ಲಿರುವ ಷರತ್ತಿನಂತೆ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ತಮ್ಮ ನೇಮಕಾತಿಯ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ನೇಮಕಾತಿಯ ಹಕ್ಕನ್ನು ಸಾಧಿಸತಕ್ಕದ್ದಲ್ಲ.

**ಸಿ.ಕೃಷ್ಣಪ್ಪ**

PR-548

ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ ಮಹಾ ಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, 7ನೇ ಮಹಡಿ, ಜಲಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು ಇವರ ನಡವಳಿಗಳು.**

**ವಿಷಯಃ** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಕೇಡರ್‌ನಲ್ಲಿ ಗುರುತಿಸಲ್ಪಟ್ಟ ಒಂದು ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗೆ ಮೀಸಲಿಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಪ್ರಥಮ ದರ್ಜೆ ಸಹಾಯಕರನ್ನು ನೇರ ನೇಮಕಾತಿ ಮೂಲಕ ನೇಮಕ ಮಾಡಿಕೊಳ್ಳುವ ಕುರಿತು.

**ಉಲ್ಲೇಖಃ**
1. ಸರ್ಕಾರದ ಅಧಿಸೂಚನೆ ಸಂಖ್ಯೆಃ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕಃ 21-11-2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 6 ಸೆನನಿ 2001 ದಿನಾಂಕ 13-02-2001.
3. ಸರ್ಕಾರದ ಅಧಿಸೂಚನೆ ಸಂಖ್ಯೆಃ ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕಃ 08-02-2000.
4. ಸರ್ಕಾರದ ಅಧಿಸೂಚನೆ ಸಂಖ್ಯೆಃ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕಃ 01-06-2002.
5. ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕಃ 30-01-2002.
6. ಈ ಕಛೇರಿಯ ಸಮಸಂಖ್ಯೆಃ ತಾತ್ಕಾಲಿಕ ಆಯ್ಕೆಪಟ್ಟಿ ದಿನಾಂಕಃ 24-03-2003.
7. ಈ ಕಛೇರಿಯ ಸಮಸಂಖ್ಯೆಃ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಪಟ್ಟಿ ದಿನಾಂಕಃ 24-11-2004.

**ಪ್ರಸ್ತಾವನೆಃ**

ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಒಂದು ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗೆ ಮೀಸಲಿಟ್ಟ ಬ್ಯಾಕ್‌ಲಾಗ್ ಹುದ್ದೆಯನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (1) (2) ಮತ್ತು (4) ರನ್ವಯ ಪ್ರಕಟಿಸಿರುವ ನಿಯಮಗಳ ಪ್ರಕಾರ ಈ ಕಛೇರಿಯ ಉಲ್ಲೇಖ (5) ರ ಅಧಿಸೂಚನೆಯಲ್ಲಿ ಪರಿಶಿಷ್ಟ ಪಂಗಡದ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿತ್ತು.

ಈ ಬಗ್ಗೆ ಸ್ವೀಕೃತವಾದ ಅರ್ಜಿಗಳನ್ನು ಪರಿಶೀಲಿಸಿ ಉಲ್ಲೇಖ (1) ರಲ್ಲಿನ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲಿ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕ ಗಳಿಸಿದ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳನ್ನು ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ಪ್ರಥಮ ದರ್ಜೆ ಸಹಾಯಕರೆಂದು ತಾತ್ಕಾಲಿಕವಾಗಿ ಆಯ್ಕೆ ಮಾಡಿ ಉಲ್ಲೇಖ (4) ರ ಸರ್ಕಾರಿ ಅಧಿಸೂಚನೆಯಲ್ಲಿನ ನಿರ್ದೇಶನದನ್ವಯ 1:1 ರ ಪ್ರಮಾಣದಲ್ಲಿ ಆಯ್ಕೆ ಮಾಡಿದ ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಈ ಕಛೇರಿಯ ಉಲ್ಲೇಖ (6) ರನ್ವಯ ದಿನಾಂಕ: 24-03-2003 ರಂದು ಪ್ರಕಟಿಸಿ ತದನಂತರ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ಅಂತಿಮಗೊಳಿಸಿ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯನ್ನು ಈ ಕಛೇರಿಯ ಉಲ್ಲೇಖ (7) ರನ್ವಯ ದಿನಾಂಕ: 24-11-2004 ರಂದು ಪ್ರಕಟಿಸಲಾಯಿತು.

ಈ ರೀತಿ ಉಲ್ಲೇಖ (7) ರನ್ವಯ ದಿನಾಂಕ: 24-11-2004 ರಂದು ಪ್ರಕಟಿಸಿರುವ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯ ಮುಖ್ಯ ಪಟ್ಟಿಯಲ್ಲಿರುವ ಒಬ್ಬ ಸಾಮಾನ್ಯ ಅರ್ಹತಾ ಅಭ್ಯರ್ಥಿಯನ್ನು ಅರ್ಹತೆ ಮತ್ತು ಮೀಸಲಾತಿಗೆ ಅನುಗುಣವಾಗಿ ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ 1-270: 2001-02, ದಿನಾಂಕ: 01-12-2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಹಾಗೂ ಉಲ್ಲೇಖ (1) ರಲ್ಲಿನ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (7) ರನ್ವಯ ದಿನಾಂಕ: 24-11-2004 ರಂದು ಪ್ರಕಟಿಸಿದ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯ ಮುಖ್ಯಪಟ್ಟಿಯಲ್ಲಿರುವ ಕೆಳಕಂಡ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಯನ್ನು ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಅರ್ಹತೆ ಆಧಾರದ ಮೇಲೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3850-100-4450-125-5700-150-7050 ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ ಹಾಗೂ ಸದರಿ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಯಲ್ಲಿ ಖಾಲಿ ಇರುವ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 16.3.2002 ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ನೇಮಕ ಮಾಡಿ ಸ್ಥಳ ನಿಯುಕ್ತಿ ಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಿಕೊಳ್ಳಲಾಗಿದೆಯೋ ಅದರ ವಿವರ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ನಿಜಗೊಂಡ, S/o ಗಣಗೊಂಡ, ಮು:ಪೋಸ್ಟ್: ಗಡಿಕುಸನೂರ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ. | 1.7.1972 | 29-08-15 | B.Sc. Ag.(Maco) 71.100 | ಜಿಲ್ಲಾ ನೋಂದಣಿ ಅಧಿಕಾರಿಗಳ ಕಛೇರಿ, (ಜಯನಗರ ಮುದ್ರಾಂಕ ಅಪಮೌಲ್ಯ ತನಿಖಾ ವಿಭಾಗ) ನಂ.12, 1ನೇ ಮಹಡಿ, 1ನೇ ಮುಖ್ಯರಸ್ತೆ, 4ನೇ ಬ್ಲಾಕ್, (ಜಯನಗರ ಕಾಂಪ್ಲೆಕ್ಸ್ ಹತ್ತಿರ), ಜಯನಗರ, ಬೆಂಗಳೂರು-560 004 | ಪರಿಶಿಷ್ಟ ಪಂಗಡದ ಮುಖ್ಯಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿ |

**ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಈ ಷರತ್ತುಗಳಿಗೆ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು.**

ಷರತ್ತುಗಳು:-

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗಧಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗಧಿಪಡಿಸಿದೆ. ಈ ಅವಧಿಯೊಳಗೆ 1974 ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗಧಿ ಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ, ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು 1977 ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಕಛೇರಿ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಕಛೇರಿ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ದರಾಗಿರುವ ಬಗ್ಗೆ ಅಭ್ಯರ್ಥಿಯು ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗಧಿತ ನಮೂನೆಯಲ್ಲಿ ಪಡೆದು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಕಛೇರಿ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆ : ಕಾಲೇಜಿನ ಮುಖ್ಯಸ್ಥರು ನೀಡಿರುವ ನಡತೆ ಪ್ರಮಾಣ ಪತ್ರಗಳನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಕಛೇರಿ ಮುಖ್ಯಸ್ಥರ ಮುಂದೆ ಹಾಜರು ಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28 ರ ರೀತ್ಯ ನೇಮಕಾತಿ ಪ್ರಾಧಿಕಾರಿಗೆ ಘೋಷಣೆ ಹಾಜರ್ ಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್ (ಸಿ.ಸಿ.ಎ.) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
15. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದು ಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದು.
16. ಈ ಅಭ್ಯರ್ಥಿಯು ಪರಿಶಿಷ್ಟ ಪಂಗಡದ ಅಭ್ಯರ್ಥಿಯಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಈ ಅಭ್ಯರ್ಥಿಯ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆಯಿಲ್ಲದೇ ರದ್ದುಪಡಿಸಲಾಗುವುದು.
17. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
18. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
19. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
20. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಯು ತಮ್ಮ ವರ್ಗಾವಣೆಗಾಗಿ ರಾಜಕೀಯ ಒತ್ತಡ ಅಥವಾ ಇನ್ಯಾವುದೇ ರೀತಿಯ ಒತ್ತಡ ತಂದಲ್ಲಿ ಅವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.
21. ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.

**ಸಿ.ಕೃಷ್ಣಪ್ಪ**
ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ ಮಹಾ ಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

PR-551

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**
**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ, 7 ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಗಳು**
**ಪರಿಶಿಷ್ಟ ಪಂಗಡದ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿ**

**ವಿಷಯಃ** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಕೇಡರ್‌ನಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗೆ ಮೀಸಲಿಟ್ಟ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಕುರಿತು.

**ಉಲ್ಲೇಖಃ**
1. ಸರ್ಕಾರದ ಅಧಿಸೂಚನೆ ಸಂಖ್ಯೆಃ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕಃ 21-11-2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 6 ಸೆನನಿ 2001 ದಿನಾಂಕಃ 13-02-2001.
3. ಸರ್ಕಾರದ ಅಧಿಸೂಚನೆ ಸಂಖ್ಯೆಃ ಎಸ್ ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕಃ 08-02-2000.
4. ಸರ್ಕಾರದ ಅಧಿಸೂಚನೆ ಸಂಖ್ಯೆಃ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕಃ 01-06-2002 (ದಿನಾಂಕಃ 14-06-2002 ರಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ)
5. ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕಃ 30-01-2002 (ದಿನಾಂಕಃ 14-02-2002 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ).
6. ಈ ಕಛೇರಿಯ ಸಮಸಂಖ್ಯೆ ತಾತ್ಕಾಲಿಕ ಆಯ್ಕೆ ಪಟ್ಟಿ ದಿನಾಂಕಃ 24-03-2003.
7. ಪರಿಶಿಷ್ಟ ಜಾತಿ ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ಪ್ರಕಟಿಸಿದ ಈ ಕಛೇರಿಯ ಸಮಸಂಖ್ಯೆ ಅಂತಿಮ ಆಯ್ಕೆ ಪಟ್ಟಿ ದಿನಾಂಕಃ 24-11-2003.
8. ಈ ಕಛೇರಿಯ ಸಮಸಂಖ್ಯೆ ರದ್ದತಿ ಆದೇಶ ದಿನಾಂಕಃ 23-11-2004.

**ಪ್ರಸ್ತಾವನೆಃ-**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಕೆಳಕಂಡ ಮೀಸಲಾತಿ ವರ್ಗೀಕರಣದ ಪ್ರಕಾರ ಗುರುತಿಸಲ್ಪಟ್ಟ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಗಳ ನೇರ ನೇಮಕಾತಿಗಾಗಿ ಉಲ್ಲೇಖ (1) ಮತ್ತು (2) ರಲ್ಲಿ ಪ್ರಕಟಿಸಿರುವ ಬ್ಯಾಕ್‌ಲಾಗ್ ನಿಯಮಗಳನ್ವಯ ಉಲ್ಲೇಖ (5) ರ ಈ ಕಛೇರಿಯ ಅಧಿಸೂಚನೆಯಲ್ಲಿ ಪ್ರಕಟಣೆ ಹೊರಡಿಸಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿತ್ತು.

| ಕ್ರ.ಸಂ | ಮೀಸಲಾತಿ ವರ್ಗೀಕರಣ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ |
|---|---|---|---|
| 1 | ಸಾಮಾನ್ಯ ಅರ್ಹತೆ ಅಭ್ಯರ್ಥಿ | 1 | 1 |
| 2 | ಮಹಿಳಾ ಅಭ್ಯರ್ಥಿ | 1 | ಇಲ್ಲ |
| 3 | ಗ್ರಾಮೀಣ ಅಭ್ಯರ್ಥಿ | 1 | ಇಲ್ಲ |
|  | ಒಟ್ಟು | 3 | 1 |

ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಉಲ್ಲೇಖ (1) ರಲ್ಲಿನ ಬ್ಯಾಕ್‌ಲಾಗ್ ನಿಯಮಗಳನ್ವಯ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳ ಪೈಕಿ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕ ಗಳಿಸಿದವರನ್ನು ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ಪ್ರಥಮ ದರ್ಜೆ ಸಹಾಯಕರೆಂದು ತಾತ್ಕಾಲಿಕವಾಗಿ ಆಯ್ಕೆ ಮಾಡಿ, ಉಲ್ಲೇಖ (4) ರ ಸರ್ಕಾರಿ ಅಧಿಸೂಚನೆ ನಿರ್ದೇಶನದನ್ವಯ 1:1 ರ ಪ್ರಮಾಣದಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಉಲ್ಲೇಖ (6) ರನ್ವಯ ದಿನಾಂಕ: 24-03-2003 ರಂದು ಪ್ರಕಟಿಸಿ ಸದರಿ ಆಯ್ಕೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು 30 (ಮೂವತ್ತು) ದಿನಗಳಗಲ್ಲಿ ಲಿಖಿತ ಮೂಲಕ ಈ ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಹಾಗೂ ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ಅವರ ವಿದ್ಯಾರ್ಹತೆಗೆ ಸಂಬಂಧಿಸಿದ ಮೂಲ ದಾಖಲೆಗಳನ್ನು ಪರಿಶೀಲನೆಗಾಗಿ 30 ದಿನಗಳಲ್ಲಿ ಹಾಜರ್ ಪಡಿಸುವಂತೆ ದಿನಾಂಕ: 11-04-2003 ರನ್ವಯ RPAD ಮೂಲಕ ನೀಡಿದ ಹಿಂಬರಹದಲ್ಲಿ ತಿಳಿಸಲಾಗಿತ್ತು.

ಈ ವಿಚಾರದಲ್ಲಿ ಯಾವುದೇ ಆಕ್ಷೇಪಣೆಗಳು ಬಾರದ ಕಾರಣ ಮತ್ತು ಆಕ್ಷೇಪಣೆಗಳನ್ನು ಸಲ್ಲಿಸಲು ನಿಗಧಿ ಪಡಿಸಲಾಗಿದ್ದ 30 ದಿನಗಳ ಅವಧಿಯು ಸಹ ಮುಕ್ತಾಯವಾದ ಕಾರಣ ಹಾಗೂ ಉಲ್ಲೇಖ (6) ರನ್ವಯ ದಿನಾಂಕ: 24-03-2003 ರಂದು ಪ್ರಕಟಿಸಿದ ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಕಂಡು ಬಂದ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ಜಾತಿ ಸಿಂಧುತ್ವ ಪ್ರಮಾಣ ಪತ್ರಗಳು ಬಾರದೇ ಇದ್ದುದರಿಂದ ಹಾಗೂ ಸದರಿ ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಕಂಡು ಬಂದ ಪರಿಶಿಷ್ಟ ಜಾತಿಯ ಎಲ್ಲಾ ಅಭ್ಯರ್ಥಿಗಳ ಪೂರ್ವ ಚರಿತ್ರಾ ವರದಿಗಳು ಪೋಲೀಸ್ ಇಲಾಖೆಯಿಂದಲೂ ಹಾಗೂ, ಪರಿಶಿಷ್ಟ ಜಾತಿಯ ಎಲ್ಲಾ ಅಭ್ಯರ್ಥಿಗಳ ಜಾತಿ ಸಿಂಧುತ್ವ ಪ್ರಮಾಣ ಪತ್ರಗಳು ಸಹ ಸಕ್ಷಮ ಪ್ರಾಧಿಕಾರದಿಂದಲೂ ಬಹಳ ಬೇಗ ಬಂದ ಕಾರಣ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳನ್ನು ಹೊರತುಪಡಿಸಿ, ಪರಿಶಿಷ್ಟ ಜಾತಿ ಅಭ್ಯರ್ಥಿಗಳಿಗೆ ಸೀಮಿತಗೊಳಿಸಿದಂತೆ ಪರಿಶಿಷ್ಟ ಜಾತಿಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆ ಪಟ್ಟಿಯನ್ನು ಕಾನೂನು ರೀತ್ಯಾ ಉಲ್ಲೇಖ (7) ರನ್ವಯ ದಿನಾಂಕ: 24-11-2003 ರಂದು ಪ್ರಕಟಿಸಲಾಯಿತು ಹಾಗೂ ಸದರಿ ಅಂತಿಮ ಆಯ್ಕೆ ಪಟ್ಟಿಯಲ್ಲಿ ಕಂಡುಬಂದ ಪರಿಶಿಷ್ಟ ಜಾತಿಯ ಎಲ್ಲಾ ಅಭ್ಯರ್ಥಿಗಳಿಗೂ ನೇಮಕಾತಿ ಆದೇಶಗಳನ್ನು ಸಹ ಹೊರಡಿಸಲಾಯಿತು.

ಈಗ ಉಲ್ಲೇಖ (6) ರನ್ವಯ ದಿನಾಂಕ: 24-03-2003 ರಂದು ಪ್ರಕಟಿಸಿದ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಅಂತಿಮಗೊಳಿಸುವುದಕ್ಕಾಗಿ ಕಡತವನ್ನು ಪರಿಶೀಲಿಸಲಾಗಿ ಉಲ್ಲೇಖ (6) ರನ್ವಯ ದಿನಾಂಕ: 24-03-2003 ರಂದು ಪ್ರಕಟಿಸಿದ ಸದರಿ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಕಂಡುಬಂದ ಪರಿಶಿಷ್ಟ ಪಂಗಡದ ಅಭ್ಯರ್ಥಿಯಾದ N. ಗುರುನಾಥ್ S/o N. ಹಾಲಪ್ಪ, ಚಿಗಟೇರಿ ಪೋಸ್ಟ್, ಹರಪನಹಳ್ಳಿ ತಾಲ್ಲೂಕ್ (ಸಾಮಾನ್ಯ ಅರ್ಹತಾ ಅಭ್ಯರ್ಥಿ) ಇವರು ಈ ಕಛೇರಿಯಿಂದ ದಿನಾಂಕ: 11-04-2003 ರಂದು ನೀಡಿದ ಹಿಂಬರಹಕ್ಕೆ ಅನುಗುಣವಾಗಿ ವಿದ್ಯಾರ್ಹತೆಗೆ ಸಂಬಂಧಿಸಿದ ಮೂಲ ದಾಖಲೆಗಳನ್ನು ಪರಿಶೀಲನೆಗಾಗಿ ಹಾಜರ್ ಪಡಿಸದೇ ಇದ್ದ ಕಾರಣ ಹಾಗೂ ಇವರ ಜಾತಿ ಸಿಂಧುತ್ವ ಪ್ರಮಾಣ ಪತ್ರವು ಈವರೆವಿಗೂ ಸಕ್ಷಮ ಪ್ರಾಧಿಕಾರದಿಂದ ಬಾರದ ಕಾರಣ ಹಾಗೂ ಕೊನೆಯದಾಗಿ ಸದರಿ ಅಭ್ಯರ್ಥಿಯು ದಿನಾಂಕ: 06-09-2004 ರಂದು ಈ ಕಛೇರಿಗೆ ಲಿಖಿತ ಮನವಿಯೊಂದನ್ನು ಸಲ್ಲಿಸಿ ಸದರಿ ಮನವಿಯಲ್ಲಿ ತಾವು ಈಗಾಗಲೇ ಸರ್ಕಾರಿ ಶಾಖಾ ಮುದ್ರಣಾಲಯ ಧಾರವಾಡ ಇಲ್ಲಿನ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ನೇಮಕಾತಿ ಹೊಂದಿ ದಿನಾಂಕ: 31-10-2002 ರಿಂದ ಕಾರ್ಯ ನಿರ್ವಹಿಸುತ್ತಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆ ಮಾಡಿದ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಹಾಜರಾಗಲು ತಮಗೆ ಇಷ್ಟವಿಲ್ಲವೆಂದು ತಿಳಿಸುತ್ತಾ, ತಮ್ಮ ಈ ಆಯ್ಕೆಯನ್ನು ರದ್ದುಗೊಳಿಸಿ, ಅರ್ಹರಾದ ಬೇರೆ ಅಭ್ಯರ್ಥಿಯನ್ನು ಆಯ್ಕೆ ಮಾಡಿಕೊಳ್ಳಬಹುದೆಂದು ತಮ್ಮ ಮನವಿಯಲ್ಲಿ ಕೋರಿಕೊಂಡ ಕಾರಣ ಇವರ ತಾತ್ಕಾಲಿಕ ಆಯ್ಕೆಯನ್ನು ಉಲ್ಲೇಖ (8) ರನ್ವಯ ದಿನಾಂಕ: 23-11-2004 ರಂದು ರದ್ದುಪಡಿಸಿ, ಈ ರೀತಿ ಇವರ ಆಯ್ಕೆಯನ್ನು ರದ್ದುಪಡಿಸಿದ ಈ ವಿಷಯವನ್ನು ಸದರಿ ಅಭ್ಯರ್ಥಿಗೆ RPAD ಮೂಲಕ ತಿಳಿಸಲಾಯಿತು.

ಈ ರೀತಿ ಪರಿಶಿಷ್ಟ ಪಂಗಡದ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ತಾತ್ಕಾಲಿಕವಾಗಿ ಆಯ್ಕೆಯಾಗಿದ್ದ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾದ ಸದರಿ N. ಗುರುನಾಥ್ ಇವರು ಈ ಇಲಾಖೆಯ ಪರಿಶಿಷ್ಟ ಪಂಗಡದ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ತಮ್ಮ ನೇಮಕಾತಿ ಹಕ್ಕನ್ನು ಕಳೆದುಕೊಂಡ ಕಾರಣ ಇವರ ಬದಲಿಗೆ ಉಲ್ಲೇಖ (6) ರನ್ವಯ ದಿನಾಂಕ: 24-03-2003 ರಂದು ಪ್ರಕಟಿಸಿದ ಪರಿಶಿಷ್ಟ ಪಂಗಡದ ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿರುವ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾದ ನಿಜಗೊಂಡ S/o ಗಣಗೊಂಡ ಮು: ಪೋಸ್ಟ್ ಗಡಿಕುಸನೂರ ಔರಾದ ತಾಲ್ಲೂಕ್ ಇವರು ತಮ್ಮ ವಿದ್ಯಾರ್ಹತೆಗೆ ಸಂಬಂಧಿಸಿದ ಮೂಲ ದಾಖಲೆಗಳನ್ನು ತಾಳೆ ಮಾಡುವುದಕ್ಕಾಗಿ ಹಾಜರುಪಡಿಸಿರುವುದರಿಂದ ಹಾಗೂ ಇವರ ಜಾತಿ ಸಿಂಧುತ್ವ ಪ್ರಮಾಣ ಪತ್ರವು ಮತ್ತು ಇವರು ಸರ್ಕಾರಿ ಸೇವೆಗೆ ಅರ್ಹರಿರುತ್ತಾರೆಂಬ ಬಗ್ಗೆ ಪೂರ್ವ ಚರಿತ್ರಾ ವರದಿಯು ಸಹ ಸಕ್ಷಮ ಪ್ರಾಧಿಕಾರದಿಂದ ಬಂದಿರುವುದರಿಂದ ಉಲ್ಲೇಖ (4) ರ ಸರ್ಕಾರಿ ಅಧಿಸೂಚನೆ ಅನ್ವಯ ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ಸದರಿ ನಿಜಗೊಂಡ (ಸಾಮಾನ್ಯ ಅರ್ಹತಾ ಅಭ್ಯರ್ಥಿ) ಇವರನ್ನು ದಿನಾಂಕ: 24-03-2003 ರಂದು ಪ್ರಕಟಿಸಿದ ಪರಿಶಿಷ್ಟ ಪಂಗಡದ ಹೆಚ್ಚುವರಿ ಪಟ್ಟಿಯಿಂದ ಮುಖ್ಯಪಟ್ಟಿಗೆ ಆಯ್ಕೆ ಮಾಡಿ ಹಾಗೂ ಇವರನ್ನು ಮುಖ್ಯಪಟ್ಟಿಗೆ ಆಯ್ಕೆ ಮಾಡಲ್ಪಟ್ಟ ಪ್ರಯುಕ್ತ ಇನ್ನೊಬ್ಬ ಪರಿಶಿಷ್ಟ ಪಂಗಡದ ಅಭ್ಯರ್ಥಿಯನ್ನು ST Merit List ನಿಂದ ಅರ್ಹತೆ ಆಧಾರದ ಮೇಲೆ ಹೆಚ್ಚುವರಿ ಆಯ್ಕೆ ಪಟ್ಟಿಗೆ ಆಯ್ಕೆ ಮಾಡಿ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದೆ.

**ಪರಿಶಿಷ್ಟ ಪಂಗಡದ ಪ್ರಥಮ ದರ್ಜೆ ಸಹಾಯಕರ ಅಂತಿಮ ಆಯ್ಕೆ ಪಟ್ಟಿ ಅಧಿಸೂಚನೆ**

**ಸಂಖ್ಯೆ: ಇಎಸ್‌ಟಿ 1-270/2001-02, ದಿನಾಂಕ: 24-11-2004**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (8) ರ ಈ ಕಛೇರಿ ರದ್ದತಿ ಆದೇಶದಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮತ್ತು ಉಲ್ಲೇಖ (1) ರಲ್ಲಿನ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಗುರುತಿಸಲ್ಪಟ್ಟ ಒಂದು ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗೆ ಮೀಸಲಿಟ್ಟ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (1) ರಲ್ಲಿನ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಕೆಳಕಂಡ ಪರಿಶಿಷ್ಟ ಪಂಗಡದ ಅರ್ಹ ಅಭ್ಯರ್ಥಿಗಳನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಥಮ ದರ್ಜೆ ಸಹಾಯಕರೆಂದು ಅಂತಿಮವಾಗಿ ಆಯ್ಕೆ ಮಾಡಿ ಪರಿಶಿಷ್ಟ ಪಂಗಡದ ಪ್ರಥಮ ದರ್ಜೆ ಸಹಾಯಕರ ಅಂತಿಮ ಆಯ್ಕೆ ಪಟ್ಟಿಯನ್ನು ಉಲ್ಲೇಖ (1) ರ ಅಧಿಸೂಚನೆಯಲ್ಲಿನ ನಿಯಮ - 6 ರನ್ವಯ ಅಭ್ಯರ್ಥಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ.

(i) ಇಲಾಖೆಯ ಹೆಸರು : ನೋಂದಣಿ ಮತ್ತು ಮುದ್ರಾಂಕ ಇಲಾಖೆ

(ii) ನೇಮಕಾತಿ ಪ್ರಾಧಿಕಾರಿ : ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು

(iii) ಹುದ್ದೆಯ ಹೆಸರು : ಪ್ರಥಮ ದರ್ಜೆ ಸಹಾಯಕರು

**ಪರಿಶಿಷ್ಟ ಪಂಗಡದ ಪ್ರಥಮ ದರ್ಜೆ ಸಹಾಯಕರ ಅಂತಿಮ ಆಯ್ಕೆ ಮುಖ್ಯಪಟ್ಟಿ (Final Selection ST Main List) (FDA Cadre)**

| ಕ್ರ. ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 16-03-2002 ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ- ತಿಂ -ದಿ | ವಿದ್ಯಾರ್ಹತೆ | ಶೇಕಡವಾರು ಅಂಕಗಳು | ಮೀಸಲಾತಿ ವರ್ಗೀಕರಣ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ನಿಜಗೊಂಡ S/o ಗಣಗೊಂಡ ಮುಃಪೋಸ್ಟ್ಃ ಗಡಿಕುಸನೂರ ಔರಾದ್ ತಾಲ್ಲೂಕ್, ಬೀದರ್ ಜಿಲ್ಲೆ Pin: 585421 | 01-07-1972 | 29-08-15 | B.Sc (Ag.Maco) | 71.100 | ಪರಿಶಿಷ್ಟ ಪಂಗಡ ಸಾಮಾನ್ಯ ಅರ್ಹತೆ ಅಭ್ಯರ್ಥಿ ಮುಖ್ಯಪಟ್ಟಿ |

**ಪರಿಶಿಷ್ಟ ಪಂಗಡದ ಪ್ರಥಮ ದರ್ಜೆ ಸಹಾಯಕರ ಅಂತಿಮ ಆಯ್ಕೆ ಹೆಚ್ಚುವರಿಪಟ್ಟಿ(Final Selection ST Additional List) (FDA Cadre)**

| 1 | 2 | 3 | 4 | 5 | 6 | 7 |
|---|---|---|---|---|---|---|
| 1 | A.T. ಕೃಷ್ಣಮೂರ್ತಿ S/o A. ತಿಪ್ಪೇಸ್ವಾಮಿ ನಂ. 1233, 43ನೇ ಅಡ್ಡರಸ್ತೆ, 19ನೇ ಮುಖ್ಯರಸ್ತೆ, 1ನೇ ಹಂತ, 5ನೇ ಬ್ಲಾಕ್, ಕಲ್ಯಾಣ ನಗರ ಅಂಚೆ, HBR ಬಡಾವಣೆ, ಬೆಂಗಳೂರು-560043. | 06-03-1971 | 31-00-10 | B.Sc (Ag.Maco) | 70.300 | ಪರಿಶಿಷ್ಟ ಪಂಗಡ ಸಾಮಾನ್ಯ ಅರ್ಹತೆ ಅಭ್ಯರ್ಥಿ ಹೆಚ್ಚುವರಿ ಪಟ್ಟಿ |

**ಈ ಅಂತಿಮ ಆಯ್ಕೆಪಟ್ಟಿಯಲ್ಲಿನ ಅಭ್ಯರ್ಥಿಗಳ ಆಯ್ಕೆಯು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.**

**ಷರತ್ತುಗಳುಃ-**

1. ಆಯ್ಕೆಯಾದ ಅಭ್ಯರ್ಥಿಗಳು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ಧೃಡಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
2. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
3. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ಧೃಢಪಟ್ಟಲ್ಲಿ ಅಂತಹ ಅಭ್ಯರ್ಥಿಯ ಆಯ್ಕೆಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಂತಹ ಅಭ್ಯರ್ಥಿಯ ವಿರುದ್ದ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/-ರೂಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಬರದುಕೊಡತಕ್ಕದ್ದು.
4. ಒಂದು ವೇಳೆ ಯಾವುದೇ ಕಾರಣದಿಂದಾಗಿ ಈ ಪಟ್ಟಿಯ ಮೂಲಕ ಆಯ್ಕೆಯಾದ ಅಭ್ಯರ್ಥಿಗಳ ಆಯ್ಕೆ ರದ್ದಾದ ಪಕ್ಷದಲ್ಲಿ ಅಂತಹವರ ಬದಲಿಗೆ ಅರ್ಹತೆ ಮತ್ತು ಮೀಸಲಾತಿ ಆಧಾರದ ಈ ಹುದ್ದೆಗಾಗಿ ಅರ್ಜಿ ಸಲ್ಲಿಸಿರುವ ಮೇಲೆ ಬೇರೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.
5. ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕದ ಯಾವುದೇ ಭಾಗದಲ್ಲಾದರೂ ಕೆಲಸ ಮಾಡಲು ಸಿದ್ದರಾಗಿರಬೇಕು.
6. ಈ ಆಯ್ಕೆ ಪಟ್ಟಿಯು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
7. ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆಯಾಗಿರುವ ಯಾವುದೇ ಅಭ್ಯರ್ಥಿಗಳು ತಮ್ಮ ನೇಮಕಾತಿ ವಿಷಯದಲ್ಲಿ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲ.
8. ಹೆಚ್ಚುವರಿ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ, ಒಂದು ವೇಳೆ ಮುಖ್ಯಪಟ್ಟಿಯಲ್ಲಿರುವವರು ಸರ್ಕಾರಿ ಸೇವೆಗೆ ಹಾಜರಾಗದೇ ಇದ್ದಲ್ಲಿ ಮಾತ್ರ ಹೆಚ್ಚುವರಿ ಪಟ್ಟಿಯಲ್ಲಿರುವವರನ್ನು ಮೀಸಲಾತಿಗೆ ಅನುಗುಣವಾಗಿ ಅರ್ಹತೆ ಆಧಾರದ ಮೇಲೆ ನೇಮಕಾತಿಗಾಗಿ ಪರಿಶೀಲಿಸಲಾಗುವುದು.
9. ಯಾವುದೇ ಕಾರಣಕ್ಕಾಗಿ ಈ ಅಂತಿಮ ಆಯ್ಕೆ ಪಟ್ಟಿಯು ಪರಿಷ್ಕರಿಸಲ್ಪಟ್ಟಲ್ಲಿ ಅಥವಾ ಬದಲಾವಣೆಯಾದಲ್ಲಿ ಸದರಿ ಪರಿಷ್ಕರಣೆಗೆ ಅನುಗುಣವಾಗಿ ಅಥವಾ ಬದಲಾವಣೆಗೆ ಅನುಗುಣವಾಗಿ ಯಾವುದೇ ಕಾರಣ ನೀಡದೇ ಈ ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳ ಆಯ್ಕೆಯನ್ನು ಮುಕ್ತಾಯಗೊಳಿಸಲಾಗುವುದು ಅಥವಾ ಪರಿಷ್ಕರಿಸಲಾಗುವುದು.
10. ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿನ ನೇಮಕಾತಿಗಾಗಿ ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ ಸಲ್ಲಿಸಿದ ಪದವಿ ಅಂಕಪಟ್ಟಿ, ಜಾತಿ ಪ್ರಮಾಣ ಪತ್ರ ಹಾಗೂ ಮೀಸಲಾತಿ ವರ್ಗೀಕರಣ ಕುರಿತು ಸಲ್ಲಿಸಿದ ಆಯಾಯ ಮೀಸಲಾತಿ ಪ್ರಮಾಣ ಪತ್ರದ ಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಅಭ್ಯರ್ಥಿಗಳನ್ನು ಆಯಾಯ Category ಯಲ್ಲಿ ಆಯ್ಕೆ ಮಾಡಲಾಗಿದೆ.

    ಒಂದು ವೇಳೆ ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆ ಬಗ್ಗೆ ದಾಖಲೆಗಳ ಸಹಿತ ಸಕಾರಣಗಳೊಂದಿಗೆ ಅವರ ಆಯ್ಕೆಯ Claim ಅನ್ನು ಸ್ಥಾಪಿಸಿದಲ್ಲಿ (establish ಮಾಡಿದಲ್ಲಿ) ಅಥವಾ ಈ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಗಳ ಆಯ್ಕೆಯನ್ನು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಯಾವುದೇ ಕಾರಣ ನೀಡದೇ ಅಥವಾ ಯಾವುದೇ ನೋಟೀಸ್ ನೀಡದೇ ಶಾಶ್ವತವಾಗಿ ರದ್ದುಗೊಳಿಸಲಾಗುವುದು ಹಾಗೂ ಅಂತಹ ಅಭ್ಯರ್ಥಿಗಳ ಬದಲಿಗೆ ಈ ಹುದ್ದೆಯ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಬೇರೊಬ್ಬ ಅಭ್ಯರ್ಥಿಯನ್ನು ಆಯ್ಕೆ ಮಾಡಲಾಗುವುದು. ಇದಕ್ಕೆ ಅಭ್ಯರ್ಥಿಗಳು ಬದ್ದರಾಗಿರತಕ್ಕದ್ದು.
11. ಉಲ್ಲೇಖ (1) ರನ್ವಯ ಪ್ರಕಟಿಸಿರುವ KCS (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್) (ವಿಶೇಷ ನೇಮಕಾತಿ) ನಿಯಮಗಳು 2001 ರಲ್ಲಿನ ನಿಯಮ 6 ರ ಪ್ರಕಾರ ಪ್ರಕಟಿಸಿರುವ ಈ ಅಂತಿಮ ಆಯ್ಕೆ ಪಟ್ಟಿಯಲ್ಲಿ ಅಭ್ಯರ್ಥಿಗಳ

ಹೆಸರನ್ನು ಸೇರಿಸಲಾಗಿದೆ ಎಂಬ ಕಾರಣಕ್ಕಾಗಿಯೇ ಈ ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಗಳು ಸದರಿ ನಿಯಮಗಳ ನಿಯಮ 7(2) ರಲ್ಲಿರುವ ಷರತ್ತಿನಂತೆ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ತಮ್ಮ ನೇಮಕಾತಿಯ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ನೇಮಕಾತಿಯ ಹಕ್ಕನ್ನು ಸಾಧಿಸತಕ್ಕದ್ದಲ್ಲ.

**ಸಿ.ಕೃಷ್ಣಪ್ಪ**

PR-552

ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಗಳು**

**ವಿಷಯಃ** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗೆ ಮೀಸಲಿಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ತಾತ್ಕಾಲಿಕವಾಗಿ ಆಯ್ಕೆಯಾದ ಶ್ರೀ ಎನ್. ಗುರುನಾಥ S/o ಎನ್. ಹಾಲಪ್ಪ, ಚಿಗಟೇರಿ ಪೋಸ್ಟ್, ಹರಪನಹಳ್ಳಿ ತಾಲ್ಲೂಕ್ ಇವರ ಆಯ್ಕೆಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖಃ**
1. ಸರ್ಕಾರದ ಅಧಿಸೂಚನೆ ಸಂಖ್ಯೆಃ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕಃ 21-11-2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 6 ಸೆನೆನಿ 2001 ದಿನಾಂಕಃ 13-02-01.
3. ಸರ್ಕಾರದ ಅಧಿಸೂಚನೆ ಸಂಖ್ಯೆಃ ಎಸ್ ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕಃ 08-02-2000.
4. ಸರ್ಕಾರದ ಅಧಿಸೂಚನೆ ಸಂಖ್ಯೆಃ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕಃ 01-06-2002 (ದಿನಾಂಕಃ 14-06-2002 ರಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ)
5. ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕಃ 30-01-2002. (ದಿನಾಂಕಃ 14-02-2002 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ)
6. ಈ ಕಛೇರಿಯ ಸಮಸಂಖ್ಯೆ ತಾತ್ಕಾಲಿಕ ಆಯ್ಕೆಪಟ್ಟಿ ದಿನಾಂಕಃ 24-03-2003.
7. ಅಭ್ಯರ್ಥಿಗೆ ಈ ಕಛೇರಿಯಿಂದ ನೀಡಿದ ಸಮಸಂಖ್ಯೆ ಹಿಂಬರಹ ದಿನಾಂಕಃ 11-04-2003.
8. ಜಿಲ್ಲಾಧಿಕಾರಿಗಳು, ದಾವಣಗೆರೆ ಇವರಿಗೆ ಬರೆದ ಈ ಕಛೇರಿಯ ಸಮಸಂಖ್ಯೆ ಪತ್ರ ದಿನಾಂಕಃ 11-04-2003.
9. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ದಾವಣಗೆರೆ ಇವರ ಪತ್ರ ಸಂಖ್ಯೆ ಜಿಸಕ/ಜಾತಿ ಸಿಂಧುತ್ವ/ಸಿಆರ್-5/2003-04 ದಿನಾಂಕಃ 30-12-2003.
10. ಅಭ್ಯರ್ಥಿಗೆ ನೀಡಿದ ಈ ಕಛೇರಿಯ ಸಮಸಂಖ್ಯೆ ಅಂತಿಮ ನೋಟೀಸ್ ದಿನಾಂಕಃ 24-8-2004.
11. ಸದರಿ ಅಭ್ಯರ್ಥಿ ಶ್ರೀ ಎನ್.ಗುರುನಾಥ ಇವರ ಮನವಿ ದಿನಾಂಕ 06-09-2004

ಪ್ರಸ್ತಾವನೆಃ

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಕೇಡರ್‌ನಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಆಭ್ಯರ್ಥಿಗೆ ಮೀಸಲಿಟ್ಟ ಒಂದು ಬ್ಯಾಕ್‌ಲಾಗ್ ಹುದ್ದೆಯ ನೇರ ನೇಮಕಾತಿಗಾಗಿ ಉಲ್ಲೇಖ (5) ರ ಈ ಕಛೇರಿಯ ಅಧಿಸೂಚನೆಗೆ ಅನುಗುಣವಾಗಿ ಬಂದ ಎಲ್ಲಾ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ ಉಲ್ಲೇಖ (1) ರ ಬ್ಯಾಕ್ ಲಾಗ್ ನಿಯಮಗಳನ್ವಯ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ಪೈಕಿ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನಿಗಧಿಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕ ಗಳಿಸಿದವರನ್ನು ಮೀಸಲಾತಿ ಆಧಾರದ ಮೇಲೆ ಪ್ರಥಮ ದರ್ಜೆ ಸಹಾಯಕರೆಂದು ತಾತ್ಕಾಲಿಕವಾಗಿ ಆಯ್ಕೆಮಾಡಿ ಉಲ್ಲೇಖ (4) ರ ಸರ್ಕಾರಿ ಅಧಿಸೂಚನೆಯಲ್ಲಿನ ನಿರ್ದೇಶನದಂತೆ 1:1 ರ ಪ್ರಮಾಣದಲ್ಲಿ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಉಲ್ಲೇಖ (6) ರನ್ವಯ ದಿನಾಂಕಃ 24-3-2003 ರಂದು ಪ್ರಕಟಿಸಲಾಯಿತು.

ತದನಂತರ, ಈ ರೀತಿ ಆಯ್ಕೆ ಮಾಡಿದ ವಿಷಯವನ್ನು ಕೆಳಕಂಡ ಅಭ್ಯರ್ಥಿಗೆ ದಿನಾಂಕಃ 11-4-2003 ರಂದು ಈ ಕಛೇರಿಯಿಂದ ಉಲ್ಲೇಖ (7) ರನ್ವಯ RPAD ಮೂಲಕ ನೀಡಿದ ಹಿಂಬರಹದ ಮೂಲಕ ತಿಳಿಸುತ್ತಾ, ಸದರಿ ಹಿಂಬರಹವು ತಲುಪಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಬ್ಯಾಕ್‌ಲಾಗ್ ಅರ್ಜಿಯ ಜೊತೆ ಸಲ್ಲಿಸಿದ ಅಂಕಪಟ್ಟಿಯ ಮತ್ತು ಎಲ್ಲಾ ಪ್ರಮಾಣ ಪತ್ರದ ಜೆರಾಕ್ಸ್ ಪ್ರತಿಗಳ ಮೂಲ ದಾಖಲೆ (Originals)ಗಳನ್ನು ಸತ್ಯಾಪನೆಗಾಗಿ ಈ ಕಛೇರಿಗೆ ಖುದ್ದಾಗಿ ಹಾಜರ್ ಪಡಿಸುವಂತೆಯೂ ಹಾಗೂ ಒಂದು ವೇಳೆ ನಿಗಧಿತ ಅವಧಿಯೊಳಗೆ ಮೂಲ ದಾಖಲೆಗಳನ್ನು ಹಾಜರ್ ಪಡಿಸದೇ ಇದ್ದಲ್ಲಿ ತಾತ್ಕಾಲಿಕ ಆಯ್ಕೆ ಪಟ್ಟಿಯಿಂದ ಇವರ ಆಯ್ಕೆಯನ್ನು ರದ್ದುಪಡಿಸಲಾಗುವುದೆಂದು ಸದರಿ ಅಭ್ಯರ್ಥಿಗೆ ಉಲ್ಲೇಖ (7) ರನ್ವಯ RPAD ಮೂಲಕ ನೀಡಿದ ಹಿಂಬರಹದಲ್ಲಿ ತಿಳಿಸಲಾಗಿತ್ತು.

ಆದರೆ, ಸದರಿ ಅಭ್ಯರ್ಥಿಯು ಈವರೆವಿಗೂ ಯಾವುದೇ ಮೂಲ ದಾಖಲೆಗಳನ್ನು ಸತ್ಯಾಪನೆಗಾಗಿ ಈ ಕಛೇರಿಗೆ ಹಾಜರ್‌ಪಡಿಸಿರುವುದಿಲ್ಲ.

ಎರಡನೆಯದಾಗಿ, ಕೆಳಕಂಡ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರಕ್ಕಾಗಿ ಜಿಲ್ಲಾಧಿಕಾರಿಗಳು ದಾವಣಗೆರೆ ಇವರಿಗೆ ದಿನಾಂಕಃ 11-4-2003 ರಂದು ಪತ್ರ ಬರೆದು ನೆನಪೋಲೆಗಳನ್ನು ನೀಡಿದರೂ ಸಹ ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವು ಈ ಕಛೇರಿಗೆ ಈವರೆವಿಗೂ ಬಂದಿರುವುದಿಲ್ಲ.

ಮೇಲ್ಕಂಡ ಪತ್ರಕ್ಕೆ ಉತ್ತರವಾಗಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ದಾವಣಗೆರೆ ಇವರು ದಿನಾಂಕ 30-12-2003 ರನ್ವಯ ಉಲ್ಲೇಖ (9) ರ ಅವರ ಪತ್ರದಲ್ಲಿ ಸದರಿ ಅಭ್ಯರ್ಥಿಯ ಜಾತಿ ಪರಿಶೀಲನೆ ಮಾಡುವುದಕ್ಕಾಗಿ ಅಗತ್ಯ ದಾಖಲೆಗಳನ್ನು ಹಾಜರ್‌ಪಡಿಸುವಂತೆ ಅಭ್ಯರ್ಥಿಗೆ ಪತ್ರ ಮುಖೇನ ಸೂಚಿಸಿದ್ದರೂ ಸಹ ಇವರು ಯಾವುದೇ ದಾಖಲೆಗಳನ್ನು ಸಕ್ಷಮ ಪ್ರಾಧಿಕಾರಕ್ಕೆ ಈವರೆವಿಗೂ ಹಾಜರ್ ಪಡಿಸಿರುವುದಿಲ್ಲವೆಂದು ಈ ಕಛೇರಿಗೆ ಉಲ್ಲೇಖ (9) ರನ್ವಯ ವರದಿ ಮಾಡಿರುತ್ತಾರೆ.

ಇದಲ್ಲದೇ ಮೂರನೆಯದಾಗಿ, ದಿನಾಂಕ 11-04-2003 ರಿಂದ ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರಕ್ಕಾಗಿ ಮೇಲ್ಕಂಡಂತೆ ಪತ್ರ ವ್ಯವಹಾರ ಮಾಡುತ್ತಲಿದ್ದರೂ ಸಹ ಇವರ ಜಾತಿ ಸಿಂಧುತ್ವ ಪತ್ರವು ಈ ಕಛೇರಿಗೆ ಬಾರದ ಕಾರಣ, as a last chance ಈ ಕಛೇರಿಯಿಂದ ದಿನಾಂಕಃ 24-08-2004 ರಂದು ಉಲ್ಲೇಖ (10) ರನ್ವಯ ಕೆಳಕಂಡ ಅಭ್ಯರ್ಥಿಗೆ ಅಂತಿಮ ನೋಟೀಸ್ ನೀಡಿ ಇವರಿಂದಲೇ ಜಾತಿ ಸಿಂಧುತ್ವ ಪ್ರಮಾಣ ಪತ್ರ

ಪಡೆಯುವುದು ಸೂಕ್ತವೆಂದು ನಿರ್ಣಯಿಸಿ, ಈ ಇಲಾಖೆಯಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಹೊಂದಲು ಇಚ್ಛೆ ಇದ್ದಲ್ಲಿ ನಿಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರಕ್ಕಾಗಿ ಸಲ್ಲಿಸಬೇಕಾದ ಅಗತ್ಯ ದಾಖಲೆಗಳನ್ನು ಜಿಲ್ಲಾಧಿಕಾರಿಗಳು ದಾವಣಗೆರೆ ಇವರಿಗೆ ಸದರಿ ನೋಟೀಸ್ ತಲುಪಿದ ಕೂಡಲೇ ಸಲ್ಲಿಸಿ ನಿಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರವು ಹದಿನೈದು ದಿನಗಳೊಳಗಾಗಿ ಈ ಕಛೇರಿಗೆ ತಲುಪಿಸುವ ವ್ಯವಸ್ಥೆಯನ್ನು ನೀವೇ ಮಾಡತಕ್ಕದ್ದೆಂದು, ಒಂದು ವೇಳೆ ಹದಿನೈದು ದಿನಗಳಲ್ಲಿ ಜಾತಿ ಸಿಂಧುತ್ವವು ಬಾರದೇ ಇದ್ದಲ್ಲಿ ತಾತ್ಕಾಲಿಕ ಆಯ್ಕೆಪಟ್ಟಿಯಿಂದ ಇವರ ಆಯ್ಕೆಯನ್ನು ಕೈಬಿಡಲಾಗುವುದೆಂದು ಸಹ ಈ ಅಭ್ಯರ್ಥಿಗೆ ನೀಡಲಾದ ನೋಟೀಸ್‌ನಲ್ಲಿ ತಿಳಿಸಲಾಗಿತ್ತು. ಇದಲ್ಲದೇ ಒಂದು ವೇಳೆ ಈ ಇಲಾಖೆಯಲ್ಲಿ ನೇಮಕ ಹೊಂದಲು ಇಚ್ಛೆ ಇಲ್ಲದಿದ್ದಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಹೊಂದಲು ನನಗೆ ಇಷ್ಟವಿಲ್ಲವೆಂದು ಹಾಗೂ ನನ್ನ ಆಯ್ಕೆಯನ್ನು ರದ್ದುಪಡಿಸಿ ನನ್ನ ಬದಲಿಗೆ ಬೇರೆ ಅರ್ಹ ಅಭ್ಯರ್ಥಿಯನ್ನು ಆಯ್ಕೆ ಮಾಡಲು ನನ್ನ ತಕರಾರು ಏನೂ ಇಲ್ಲವೆಂಬ ಲಿಖಿತ ಮನವಿಯನ್ನು ಕೂಡಲೇ ಸಲ್ಲಿಸುವಂತೆಯೂ ನೋಟೀಸ್‌ಲ್ಲಿ ತಿಳಿಸಲಾಗಿತ್ತು.

ಈ ವಿಷಯದಲ್ಲಿ ಸದರಿ ಅಭ್ಯರ್ಥಿಯು ದಿನಾಂಕ 6-9-2004 ರಂದು ಈ ಕಛೇರಿಗೆ ಲಿಖಿತ ಮನವಿಯೊಂದನ್ನು ಸಲ್ಲಿಸಿ, ಸದರಿ ಮನವಿಯಲ್ಲಿ ತಾವು ಈಗಾಗಲೇ ಸರ್ಕಾರಿ ಶಾಖಾ ಮುದ್ರಣಾಲಯ ಧಾರವಾಡ ಇಲ್ಲಿನ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ನೇಮಕಾತಿ ಹೊಂದಿ ದಿನಾಂಕಃ 31-10-2002 ರಿಂದ ಕಾರ್ಯ ನಿರ್ವಹಿಸುತ್ತಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆ ಮಾಡಿದ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಹಾಜರಾಗಲು ತಮಗೆ ಇಷ್ಟವಿಲ್ಲವೆಂದು ತಿಳಿಸುತ್ತಾ ತಮ್ಮ ಈ ಆಯ್ಕೆಯನ್ನು ರದ್ದುಗೊಳಿಸಿ, ಅರ್ಹರಾದ ಬೇರೆ ಅಭ್ಯರ್ಥಿಯನ್ನು ಆಯ್ಕೆ ಮಾಡಿಕೊಳ್ಳಬಹುದೆಂದು ತಮ್ಮ ಮನವಿಯಲ್ಲಿ ಕೋರಿರುತ್ತಾರೆ.

ಮೇಲ್ಕಂಡ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (6) ರನ್ವಯ ದಿನಾಂಕಃ 24-3-2003 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಪರಿಶಿಷ್ಟ ಪಂಗಡದ ಪ್ರಥಮ ದರ್ಜೆ ಸಹಾಯಕರ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಅಭ್ಯರ್ಥಿಯ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸುವುದು ಉಚಿತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆಃ EST-1-270/01-02, ದಿನಾಂಕಃ 23-11-2004**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (6) ರನ್ವಯ ದಿನಾಂಕಃ 24-03-2003 ರಂದು ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಪಂಗಡದ ಪ್ರಥಮ ದರ್ಜೆ ಸಹಾಯಕರ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಪಂಗಡದ ಅಭ್ಯರ್ಥಿಯ ತಾತ್ಕಾಲಿಕ ಆಯ್ಕೆಯನ್ನು ಅವರ ಕೋರಿಕೆಯಂತೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ರದ್ದುಪಡಿಸಲಾಗಿದೆ.

ಕೆಳಕಂಡ ಪರಿಶಿಷ್ಟ ಪಂಗಡದ ಅಭ್ಯರ್ಥಿಯು ಇನ್ನು ಮುಂದೆ ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ರೀತಿಯ ಹಕ್ಕನ್ನು ಹೊಂದಿರತಕ್ಕದಲ್ಲವೆಂದು ಮತ್ತು ಯಾವುದೇ ರೀತಿಯ ಹಕ್ಕನ್ನು ಸಹ ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

| ಕ್ರ. ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 16-03-2002 ರ ಅಂತ್ಯಕ್ಕೆ ಅಭ್ಯರ್ಥಿ ವಯಸ್ಸು | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಷರಾ |
|---|---|---|---|---|---|
| 1 | N.ಗುರುನಾಥ S/o ಹಾಲಪ್ಪ ಚಿಗಟೇರಿ ಪೋಸ್ಟ್ ಹರಪನಹಳ್ಳಿ ತಾಲ್ಲೂಕ್ ದಾವಣಗೆರೆ ಜಿಲ್ಲೆ. | 25-03-1971 | 30-11-21 | B.Sc, (Agri) 72.200 | ಪರಿಶಿಷ್ಟ ಪಂಗಡ ಸಾಮಾನ್ಯ ಅರ್ಹತಾ ಅಭ್ಯರ್ಥಿ ಮುಖ್ಯಪಟ್ಟಿಯಲ್ಲಿನ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸಿದೆ. |

**ಸಿ.ಕೃಷ್ಣಪ್ಪ**
ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ ಮಹಾ ಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

PR-553

## OFFICE OF THE CONSERVATOR OF FORESTS, SHIMOGA CIRCLE, SHIMOGA

## NOTIFICATION

### No. A3/SAS/CR.2/2004-05, Dated 2nd December 2004

It is hereby notified for the information of general public that Beete, Teak, other kind Timber, poles and firewood available in the following Government Timber Depots of Shimoga Circle, will be sold in public auction on the dates shown against each depot.

**Approximate Qty. of Timber F/W etc. exposed for sale**

| Sl. No. | Name of the Division/ Depot | Date of sale | Beete | Teak | Other kind | Poles | RK Billets | Fire wood | Size | Cycle/ Bullock carts/ ballies | Ree-pers |
|---|---|---|---|---|---|---|---|---|---|---|---|
| 1 | Sagar Dn | | M3 | M3 | M3 | No.s | M3 | M3 | M3 | Nos | Rft |
| a | Sagar | 2/1/2005, 3/1/2005 & 4/1/2005 | 90.227 | 55.482 | 625.474 | 1607 | 5.863 | 58.920 (Acacia) 127.180 (Jungle wood) | 26.252 | | |
| B | Shikaripura | 5/1/2005 | 10.200 | 6.100 | 77.360 | 20 | | | 3.000 | 30 cycles 10 bullock carts | |
| C | Hosanagar | 6/1/2005 | 3.762 | 0.974 | 65.829 | 387 | 0.313 | | 2.466 | | 240 |
| 2 | Shimoga Dn. | | | | | | | | | | |
| a | Alkola | 7/1/2005 & 8/1/2005 | 21.973 | 15.052 | 1424.529 | 1367 (teak) | 3.165 (teak) | | | | |
| 3 | Bhadravati Dn. | | | | | | | | | | |
| a | Tarikere | 10/1/2005 | 45.000 | 8.000 | 25.000 | 60 (teak) | 2.000 (beete) | | | 20 (Eucalyptus ballies) | |

PR-565

Conservator of Forests, Shimoga Circle, Shimoga.